# ಶೂದ್ರ

ಬೆಲೆ : ರೂ. 1-50



ಎಲ್ಲವನ್ನೂ ಮರೆತು ಕುಣಿಯುವುದೆಂದರೆ.....

**ಅರ್ಥಪೂರ್ಣ ಚಿಂತನೆಯ ದಿಕ್ಕಿನಲ್ಲಿ ಶೂದ್ರ ತಿಂಗಳ ಪತ್ರಿಕೆ**

---

**ಸಂಚಿಕೆ : 10** ಆಗಸ್ಟ್ 1983 **ಸಂಪುಟ : 8**

---

ಸಹಾಯಕ ಸಂಪಾದಕರು : ನಿರ್ಮಲರೆಡ್ಡಿ–ಶಶಿಕಲಾ ವಸ್ತ್ರದ
ಆನಂದಮೂರ್ತಿ

---

ಮುಖಪುಟದ ಚಿತ್ರದಕೃಪೆ : ಇಂಡಿಯನ್ ಕ್ಲಾಸಿಕಲ್ ಡ್ಯಾನ್ಸ್‌ಗ್ರಂಥ. (ಈಚಿತ್ರವನ್ನು ಹಿಂದೆ ಬಳಸಿದ್ದೆವು. ಗೆಳೆಯರ ಸಲಹೆಯ ಮೇರೆಗೆ ಮತ್ತೆ ಬಳಸುತ್ತಿದ್ದೇವೆ.)

ಹಿಂಬದಿಯ ಚಿತ್ರ : ಮೈಕೇಲೆಂಜಲ್‌ನ ಚಿತ್ರ. (ಇದನ್ನು ಗೆಳೆಯ ಚಂದ್ರ ಶೇಖರಉಪಾಲ ತನ್ನ ಮದುವೆಯ ಕರೆಯೋಲೆಗೆ ಬಳಸಲು ಬ್ಲಾಕ್‌ಮಾಡಿಸಿದ. ಆದರೆ ಅದಕ್ಕೆ ನಾನಾ ತೊಂದರೆಗಳಾಗಿ ಬಳಸಿಲ್ಲ)

---

**ಈ ಸಂಚಿಕೆಯಲ್ಲಿ : ನಾಗರಾಜಪ್ಪ—ನಾಗೇಂದ್ರ—ಎ. ಆರ್. ನಾಗಭೂಷಣ ವಿ. ಚಿಕ್ಕವೀರಯ್ಯ — ಸಿದ್ಧಲಿಂಗಯ್ಯ — ಆನಂದಮೂರ್ತಿ — ಬಿಳಿಗಿರಿ ಬಿ. ರಾಜಣ್ಣ — ಎಚ್. ಎಸ್ ಚಂಪಾವತಿ — ಕನಸಿಗೊಂದುಕಣ್ಣು ಸುತ್ತ ಮುತ್ತ.**

---

ಶೂದ್ರಕ್ಕೆ ಚಂದಾ ಕಳಿಸಿ , ಶೂದ್ರ ಬರದಿದ್ದರೆ ಪತ್ರ ಬರೆಯಿರಿ

---

ವಾರ್ಷಿಕ ಚಂದಾ : 18 ರೂ. ಆಜೀವ ಚಂದಾ : 200 ರೂ.
(ಐದು ಕಂತುಗಳು)

---

ಶೂದ್ರ ಶ್ರೀನಿವಾಸ್, ಸುದ್ದುಗುಂಟೇಪಾಳ್ಯ, ಡಿ.ಆರ್. ಕಾಲೇಜು ಅಂಚೆ
ಬೆಂಗಳೂರು-560 029

---

# ಡಿ. ವಿ. ಜಿ. ಅವರ ಶ್ರೀ ರಾಮ ಪರೀಕ್ಷಣಂ

## ಒಂದು ವಿಶ್ಲೇಷಣೆ

—ಕೆ. ಜಿ. ನಾಗರಾಜಪ್ಪ

ವಾಲ್ಮೀಕಿ ಸರ್ವಗುಣ ಸಂಪನ್ನನಾದ ಆದರ್ಶ ಪುರುಷನ ಚಿತ್ರವನ್ನು ರಾಮಾಯಣದಲ್ಲಿ ಕಡೆದನು ಅಲ್ಲಿಂದ ಶ್ರೀರಾಮ ಅವತಾರ ಪುರುಷನಾದರೂ ಆದರ್ಶಮಾನವ ಗುಣಗಳಿಂದಲೇ ಶ್ರೀ ರಾಮನ ಎಲ್ಲ ಕ್ರಿಯೆಗಳನ್ನೂ ಒರೆಹಚ್ಚಿ ಅವನ ವ್ಯಕ್ತಿತ್ವವನ್ನು ರೂಪಿಸುವುದು ಸಂಪ್ರದಾಯವಾಯಿತು. ಆದರೆ ಪರಿಸರದ ಒತ್ತಡಕ್ಕೆ ಸಿಕ್ಕಿದ ಶ್ರೀ ರಾಮ ತಿಳಿದೊ ಒಪ್ಪಿಯೊ ಒಪ್ಪದೆಯೊ ತಿಳಿಯದೆಯೊ ಧರ್ಮ ವಿರೋಧಿ ಎಂದು ಪ್ರಶ್ನಿಸಬಹುದಾದ ಕೆಲವು ಕಾರ್ಯಗಳನ್ನು ಮಾಡುವುದು ಅನಿವಾರ್ಯವಾಯಿತು. ಅಂಥ ಪ್ರಸಂಗಗಳು ಶ್ರೀ ರಾಮನ ಪರಿಪೂರ್ಣ ಆದರ್ಶ ಜೀವನದಲ್ಲಿ ಕಪ್ಪುಕಲೆಗಳಾಗಿ ಮುಂದಿನ ಜನಾಂಗಕ್ಕೆ ಎದ್ದು ಕಂಡವು. ವಾಲ್ಮೀಕಿ ಕಡೆದ ಆದರ್ಶಮಾನವ ಶ್ರೀ ರಾಮನಲ್ಲಿ ಇಂಥ ದೋಷವನ್ನು ಜನ ಸಹಿಸದಾದರು. ಸತ್ಯವಿರೋಧಿಯಾಗಿ ಕಂಡ ಶ್ರೀ ರಾಮನ ಕಾರ್ಯವನ್ನು ಮತ್ತೆ ಮತ್ತೆ ಸತ್ಯಶೋಧನೆಗೆ ಒಳಗು ಮಾಡಿದರು. ಅವನನ್ನು ಆದರ್ಶ ವ್ಯಕ್ತಿಯಾಗಿಯೇ ಲೋಕದ ಕಣ್ಣಿಗೆ ಕಾಣಿಸುವಂತೆ ಕಳಂಕ ರಹಿತನನ್ನಾಗಿ ಮಾಡುವಲ್ಲಿ ಹಲವರು ತಮ್ಮ ಪ್ರತಿಭೆಯನ್ನು ಮೆರೆದರು. ಆದರೆ ಕೃಷ್ಣನಿಗೆ ಇಂಥ ತೊಡಕು ಬರಲಿಲ್ಲ. ಅವನೂ ಅವತಾರಿಯೇ ಆಗಿದ್ದರೂ ದೇವರಾಗಿ ಮೆರೆದು ಎಲ್ಲಾ ದ್ವಂದ್ವ ಮತ್ತು ವಿರೋಧಾಭಾಸವನ್ನೂ ಮೀರಿ ಪ್ರಶ್ನಾತೀತ ಪುರುಷನಾದನು. ಶ್ರೀ ರಾಮ ಕೃಷ್ಣನಂತೆ ಲೋಕ ಸಂಗ್ರಹಕ್ಕಾಗಿ ಅವತಾರ ಎತ್ತಿದ್ದರೂ ಆದರ್ಶ ಮಾನವನ ವ್ಯಕ್ತಿತ್ವದ ಸೂತ್ರಕ್ಕೆ ಕಟ್ಟುಬಿದ್ದು ಕೆಲವು ವಿರೋಧಾಭಾಸಗಳಿಗೆ ಸಿಕ್ಕಿದನು. ಗುರಿ ಮತ್ತು ದಾರಿ ಎರಡೂ ಶುದ್ಧವಾಗಿರುವ ತತ್ವಕ್ಕೆ ಕಟ್ಟು ಬಿದ್ದು ಕೆಲವು ಸಂದರ್ಭಗಳಲ್ಲಿ ಅದು ಸಾಧ್ಯವಾಗದೆ ಗೋಜಿಗೆ ಒಳಗಾದನು. ಅಂಥ ಗೊಂದಲದ ಪ್ರಸಂಗಗಳಿಂದ ರಾಮನನ್ನು ಪಾರುಮಾಡಲು ರಾಮಾಯಣದಿಂದ ಆರಿಸಿಕೊಂಡು ಪಾತ್ರಗಳನ್ನು ಉದಾತ್ತೀಕರಿಸುವ ಪ್ರಯತ್ನ ಭಾಸ, ಭವಭೂತಿ ಮುಂತಾದ ನಾಟಕ

ಕಾರಿಂದ ಸಂಸ್ಕೃತ ಸಾಹಿತ್ಯದಲ್ಲಿಯೂ ಮತ್ತು ಇತರರಿಂದ ದೇಶೀಯ ಭಾಷೆಗಳಲ್ಲಿಯೂ ನಡೆದಿರುವುದು ಕಂಡು ಬರುತ್ತದೆ.

ಧರ್ಮ ವಿರೋಧಿ ಮತ್ತು ಶಾಸ್ತ್ರ ವಿರೋಧಿಯಾಗಿ ಶ್ರೀ ರಾಮ ಎಂದೆಂದಿಗೂ ನಡೆಯುವುದಿಲ್ಲ. ಮತ್ತು ನಡೆಯಬಾರದು ಎಂದು ನಂಬಿ ಹಠಹಿಡಿದಿರುವ ಶ್ರೀ ರಾಮ ಭಕ್ತರು ರಾಮಾಯಣ ರಚನೆಗೊಂಡ ಕಾಲ, ದೇಶ ಮತ್ತು ಸಮಾಜದ ಇತಿ ಮಿತಿಯನ್ನು ಮರೆತು ಸಮಕಾಲೀನ ಧರ್ಮದ ಮೌಲ್ಯಗಳ ಆಧಾರದ ಚೌಕಟ್ಟಿನಲ್ಲಿ ವಿರೋಧಾಭಾಸವನ್ನು ಪರಿಹರಿಸುವ ಪ್ರಯತ್ನದಲ್ಲಿ ವಿಫಲರಾಗಿರುವುದು ಕಂಡು ಬರುತ್ತದೆ. ಮೂಗಿಗಿಂತ ಮೂಗುತಿ ಭಾರ ಎಂದಂತೆ ಮೂಲ ಸಮಸ್ಯೆಗಳಿಗಿಂತ ಸೂಚಿಸಿರುವ ಪರಿಹಾರವೇ ಹೊಸ ಹೊಸ ಸಮಸ್ಯೆಗಳ ಸೃಷ್ಟಿಗೆ ಕಾರಣವಾಗಿ ಮೂಲ ಸಮಸ್ಯೆಗಳನ್ನೇ ಮರೆಸುವಂತೆ ಮಾಡಿರುವುದು ರಾಮಾಯಣ ಅಧ್ಯಯನದಲ್ಲಿ ಅಡ್ಡದಾರಿ ಹಿಡಿದಂತೆಯೇ ಸರಿ.

ಡಿ. ವಿ ಗುಂಡಪ್ಪನವರು' ಪ್ರಸಿದ್ಧ ಪಂಡಿತರು, ಗಂಭೀರಚಿಂತಕರು. ಅವರು 'ಶ್ರೀ ರಾಮ ಪರೀಕ್ಷಣಂ' ಕೃತಿಯಲ್ಲಿ ರಾಮಾಯಣವನ್ನು ತಮ್ಮ ಚಿಂತನೆಗೆ ವಸ್ತುವನ್ನಾಗಿಸಿ ಕೊಂಡು ಕಾತ್ತ್ವಿಕ ವ್ಯಾಖ್ಯಾನದಿಂದ ಕೆಲವು ಪ್ರಸಂಗಗಳ ವಿರೋಧಾಭಾಸವನ್ನು ಬಗೆಹರಿಸುವ ಪ್ರಯತ್ನವನ್ನು ಮಾಡಿದ್ದಾರೆ. ಅವರ ಚಿಂತನೆ ಕಾವ್ಯ ರೂಪದಲ್ಲಿ ವ್ಯಕ್ತಗೊಂಡಿದೆ. ಇಂಥ ಚಿಂತನೆ ಸತ್ಯ ಶೋಧನೆಗೆ ಅವಕಾಶವನ್ನು ಒದಗಿಸುತ್ತದೆ. ತತ್ವ ಮಂಥನದಿಂದ ಸಮಸ್ಯೆಗಳ ಪರಿಹಾರಕ್ಕೆ ಒಂದು ತಾರ್ಕಿಕ ತಳಹದಿ ದೊರಕಿಸಿ, ಸಾಮಾಜಿಕನ ದ್ವೇಷ ಅಸೂಯೆಗಳು ಸೋಂಕು ನಿವಾರಣೆಯಾಗಿ ಒಂದು ವ್ಯವಸ್ಥೆ ಮಾಡಿ ಶಾಂತಿ ಸಮಾಧಾನದ ಪರಿಸರವೊಂದನ್ನು ಸೃಷ್ಟಿಸುವ ಪ್ರಯತ್ನವೇ ಶ್ರೀ ರಾಮ ಪರೀಕ್ಷಣಂ ಕಾವ್ಯದ ಗುರಿಯಾಗಿದೆ. ಅಹಲ್ಯೆ ಗೌತಮ ಇಂದ್ರರು ಮುಗ್ಧ ಬಾಲಕನಾದ ಶ್ರೀ ರಾಮನಿಗೆ ಮನುಷ್ಯ ಸ್ವಭಾವದ ವಿವರವನ್ನೊಳಗೊಂಡ ವಿಶ್ಲೇಷಣಾತ್ಮಕ ಪ್ರಶ್ನೆಯನ್ನು ಹಾಕುತ್ತಾರೆ. ತಾರೆ, ಮಂಡೋದರಿ, ಸೀತೆ, ಲೋಕಜನ ಮತ್ತು ಹನುಮಂತರೂ ಪ್ರಶ್ನಿಸುವುದರ ಮೂಲಕ ಶ್ರೀರಾಮನನ್ನು ಒರೆ ಹಚ್ಚುತ್ತಾರೆ. ಶ್ರೀರಾಮ ತನ್ನ ವ್ಯಕ್ತಿತ್ವದ ಮಿತಿಯಲ್ಲಿಯೇ ಉತ್ತರಿಸುವ ಇಬ್ಬರಿಗೂ ಏಕ ಕಾಲದಲ್ಲಿಯೇ ಜೊತೆ ಜೊತೆಯಾಗಿ ಆತ್ಮ ಶೋಧನೆಯಾಗುತ್ತದೆ.

ಆದರೆ ಪ್ರಶ್ನೆ ಮತ್ತು ಉತ್ತರಗಳಲ್ಲಿ ಸಹೃದಯರು ಎಷ್ಟರ ಮಟ್ಟಿಗೆ ತಾದಾತ್ಮ್ಯ ಭಾವದಿಂದ ಅಲ್ಲಿ ಬರುವ ಪಾತ್ರಗಳಂತೆಯೇ ಸಮಾಧಾನ ಹೊಂದ ಬಲ್ಲರು ಎಂಬುದರ ಮೇಲೆ ಶ್ರೀರಾಮ ಪರೀಕ್ಷಣಂ ಕಾವ್ಯದ ಯಶಸ್ಸು ನಿಂತಿದೆ. ಶ್ರೀ ರಾಮ ಪರೀಕ್ಷಣಂ

ಕಾವ್ಯ ರಾಮಾಯಣದ ಸಮಗ್ರ ಸಮಸ್ಯೆಗಳನ್ನು ತನ್ನ ಚಿಂತೆಗೆ ಒಳಗುಮಾಡಿ ಕೊಂಡಿಲ್ಲ. ಸೀಮಿತವಾದ ಪ್ರಸಂಗಗಳನ್ನು ಮಾತ್ರ ಆರಿಸಿ ವಸ್ತುವನ್ನಾಗಿಸಿಕೊಂಡಿರುವುದರಿಂದ ಇದನ್ನು ಒಂದು ಖಂಡ ಕಾವ್ಯ ಎನ್ನಬಹುದು.

ಡಿ. ವಿ. ಜಿ. ಯವರು ರಾಮಾಯಣದಲ್ಲಿ ಬರುವ, ಶ್ರೀರಾಮನಿಗೆ ನೇರವಾಗಿ ಸಂಬಂಧ ಹೊಂದಿರುವ. ಗೃಹಸ್ಥ ಜೀವನದ ಹಲವು ಸ್ತರದ ಪ್ರಣಯದ ವಿವಿಧ ದಾರಿ-ಮಾರ್ದನಿಯನ್ನು ಗುರುತಿಸಿ ತಮ್ಮ ಚಿಂತನೆಗೆ ಒಂದು ಮಿತಿಯನ್ನು ನಿರ್ಮಿಸಿ ಕೊಂಡಿದ್ದಾರೆ. ಶ್ರೀ ರಾಮ ಪರೀಕ್ಷಣಂ ಕಾವ್ಯದಲ್ಲಿ ಅಹಲ್ಯೆಯ ಪ್ರಶ್ನೆಯೇ ಪ್ರಧಾನವಾದುದು. ಜನದ ಪ್ರಶ್ನೆ ಅಹಲ್ಯೆಯ ಪ್ರಶ್ನೆಯಂತೆಯೇ ಜನಪದ ಮತ್ತು ಶ್ರೀ ರಾಮ ತಾವು ಸೀತೆಗೆ ಮಾಡಿದ ಅಪರಾಧಕ್ಕಾಗಿ ಪಶ್ಚಾತಾಪ ಪಟ್ಟ ವಿವರಗಳಿಂದ ಕೂಡಿದ ವಿಶ್ಲೇಷಣಾತ್ಮಕವಾದ ಪ್ರಶ್ನೆಯಾಗುತ್ತದೆ. ಕೊನೆಯಲ್ಲಿ ಬರುವ ಹನುಮಂತನ ಪ್ರಶ್ನೆಗಳಿಗೂ ಉಪ ಸಂಹಾರದಂತೆ ಕಂಡು ಬರುತ್ತದೆ. ಪ್ರಣಯದ ಪ್ರಳಯಕ್ಕೆ ಸಿಕ್ಕಿದ ಕೆಲವರು ಪಶ್ಚಾತ್ತಾಪದಿಂದ ಕ್ಷಮೆಯಿಂದ ಶ್ರೀ ರಾಮನ ಅನುಗ್ರಹ ಹೊಂದಿದರೆ, ಮತ್ತು ಕೆಲವರು ಅವನಿಂದ ದಂಡನೆಗೆ ಗುರಿಯಾಗುತ್ತಾರೆ ಪಾತಕಿಗಳು (ಅಹಲ್ಯೆ ಮತ್ತು ಇಂದ್ರ) ಪರಿಶುದ್ಧರಾಗಿ ಮರು ಬಾಳು ಪಡೆಯುತ್ತಾರೆ. ಮನಃ ಪಾತಕಿಗಳಿಗೆ (ರಾವಣ ಮತ್ತು ವಾಲಿ) ದಂಡನೆ ಅನಿವಾರ್ಯವಾಗುತ್ತದೆ. ಇದರಿಂದ ತಾರೆ, ಮಂಡೋದರಿಯರು ವಿಧವೆಯಾಗುತ್ತಾರೆ. ಅಷ್ಟೇ ಏಕೆ ಶ್ರೀ ರಾಮನಿಗೇ ಹೆಂಡತಿಯನ್ನು ಕಳೆದುಕೊಂಡು ವಿಧುರನಾಗುವ ದುರ್ಗತಿ ಒದಗುತ್ತದೆ. ಗೃಹಸ್ಥರ ಪ್ರಣಯದ ವಿಕಾರ ಜೀವನ ಒಂದೊಂದು ಪ್ರಕರಣದಲ್ಲಿ ಒಂದೊಂದು ಫಲವನ್ನು ಕೊಡುತ್ತದೆ. ತೀರ ಹತ್ತಿರ ಇದ್ದೂ, ನೆಚ್ಚಿನ ಭಂಟನಾಗಿದ್ದು ಒಡೆಯನ ಚಾರಿತ್ರ್ಯವನ್ನು ಅರ್ಥ ಮಾಡಿಕೊಳ್ಳದ ಹನುಮಂತನ ಪ್ರಶ್ನೆಗೆ ಶ್ರೀ ರಾಮ ಗುರುವಸಿಷ್ಠರಿಂದ ಕಲಿತು ಧ್ಯಾನ ಮತ್ತು ಅನುಷ್ಠಾನದಿಂದ ಉಂಟಾದ ತಾತ್ತ್ವಿಕ ವಿವರಣೆಯನ್ನು ಕೊಟ್ಟು ದಾರಿ ದೀಪವಾಗುತ್ತಾನೆ.

ಸಾಮಾನ್ಯವಾಗಿ ಎಲ್ಲಿ ಪ್ರಶ್ನೆಗಳಲ್ಲಿಯೂ ಮನುಷ್ಯನ ಇತಿಮಿತಿ, ಇಚ್ಛಾಶಕ್ತಿಯ ನಿಯಂತ್ರಣ, ವಿಧಿಯ ಸರ್ವಾಧಿಕಾರಿ, ಪಾಪದ ಫಲ, ಪ್ರಕೃತಿಯ ಸ್ವಭಾವ ಮಾಯೆಯ ಸಂಚು, ಆತ್ಮದ ಅಮರತ್ವ ಇವು ತಾತ್ತ್ವಿಕ ಚಿಂತನೆಯ ವಲಯದಲ್ಲಿ, ಬಂದು ಹೋಗುವ ಅಂಶಗಳಾಗಿವೆ. ಕರ್ಮ ಸಿದ್ಧಾಂತ ಪ್ರಮುಖವಾಗಿ ಚರ್ಚಿತವಾಗಿದೆ ಈ ಎಲ್ಲ ಅಂಶಗಳು ಧರ್ಮದ ಹಿನ್ನೆಲೆಯಲ್ಲಿ ನಂಬಿಕೆಯ ವಿಷಯಗಳಾಗಿ ಬರುತ್ತವೆ. ಮತ್ತು ತತ್ತ್ವದಿಂದ ಅರಿತೆವು ಎಂಬ ಮಾತು ಬಂದರೆ, ಮತ್ತೆ ಕೆಲವು ಕಡೇ ವಿಧಿ ವಿಕಟದನು ಚಿಂತೆಯೊಳೆ ಶಮವನರಸು ಎಂದು ಬರುತ್ತದೆ. ತತ್ತ್ವ ಮತ್ತು ವಿಧಿ, ಸಮಾನವಾದುವಲ್ಲ. ಅಲ್ಲಲ್ಲಿ ಇಂಥ ಗೊಂದಲ ಶ್ರೀ ರಾಮ ಪರೀಕ್ಷಣದಲ್ಲಿ ತಲೆ

ದೋರುತ್ತದೆ. ಪಾಪದ ಕಲ್ಪನೆಯು ಮೂಲ ತಾರ್ಕಿಕವಾಗಿ ನಿರೂಪಣೆಯಾಗುವ ಬದಲು ಕಾವ್ಯಮಯ ಸಂವೇದನೆಯ ಉದ್ವಿಗ್ನತೆಯ ಹಂತದಲ್ಲಿಯೇ ಉಳಿಯುತ್ತದೆ. ಇಲ್ಲಿ ಬರುವ ತತ್ತ್ವ ಚಿಂತನೆ ಇಂದ್ರಿಯಾತೀತ ಅಮೂರ್ತ ಸತ್ಯದೊಂದಿಗೆ ವ್ಯವಹರಿಸುವುದಕ್ಕೆ, ಮೂರ್ತವಾದ ಸಾಮಾಜಿಕ ಸಮಸ್ಯೆಗಳನ್ನು ಕೆಮಟ್ಟ ಶೋಧಿಸದೆ ಕೇವಲ ದೈವೀಕರಿಸುವುದರ ಮೂಲಕ, ಜೀವನ ಒಳತತ್ತ್ವವನ್ನು ಧ್ವನಿಸಿ ಲೋಕವನ್ನು ಮೀರಿದ ಅತಾರ್ಕಿಕ ದಿವ್ಯಾನುಭವದಲ್ಲಿ ವಿರೋಧಾಭಾಸವನ್ನು ಹೋಗಲಾಡಿಸಿ ಕೊಳ್ಳುವುದು ಕಂಡು ಬರುತ್ತದೆ ಕಾಲ, ದೇಶ ಬದ್ಧವಾದ ನಿರ್ದಿಷ್ಟ ಸಮಾಜದ ಘಟನೆಯನ್ನು ಅನ್ವಯಿಸಿ ವಿಶ್ಲೇಷಿಸಿದರೆ ಮಾತ್ರ ತತ್ತ್ವ ಸಾರ್ಥಕತೆಯನ್ನು ಪಡೆಯುವುದು. ಆಗ ಅಮೂರ್ತವಾದ ತತ್ತ್ವ ಚಿಂತನೆಗೆ ಮೂರ್ತ ಸ್ವರೂಪ ಒದಗಿ ಲೌಕಿಕ ಆಚಾರದೊಂದಿಗೆ ತತ್ತ್ವ ಸಂಬಂಧ ಹೊಂದಿ ಹೆಚ್ಚು ಅರ್ಥವಾಗುತ್ತದೆ.

ಅಹಲ್ಯೆಯ ಪ್ರಶ್ನೆ ಪಾಪ ಪುಣ್ಯಕ್ಕೆ ಹಿಡಿದ ಕನ್ನಡಿ. ವಿಶ್ವಾಮಿತ್ರ ಶ್ರೀರಾಮನೊಂದಿಗೆ ಗೌತಮ ಆಶ್ರಮಕ್ಕೆ ಕಾಲಿಡುತ್ತಿದಂತೆಯೇ ಅಹಲ್ಯೆಯ ಶಾಪ ವಿಮೋಚನೆಯಾಗಿ ನಿರ್ಜನ ಪ್ರದೇಶದಲ್ಲಿ ಹೆಣ್ಣಿನ ಮೊರೆ ಕೇಳಿ ಶ್ರೀ ರಾಮ ಕುತೂಹಲಿಯಾಗುತ್ತಾನೆ. ವಿಶ್ವಾಮಿತ್ರ ಋಷಿ, ಅವಳು ಗೌತಮನ ಸತಿಯೆಂದು ಪರಿಚಯಿಸುತ್ತಿದ್ದಂತೆಯೇ ಅಹಲ್ಯೆ ಬಂದು ತನ್ನ ಆತ್ಮದವನತಿಯ ಕತೆಯನ್ನು ಶ್ರೀ ರಾಮನಿಗೆ ಹೇಳಲು ಆರಂಭಿಸುತ್ತಾಳೆ. ಮಾಡಿದ ಪಾಪಕ್ಕಾಗಿ ಪಶ್ಚಾತ್ತಾಪ ಪಟ್ಟು ಅವನತಿಯ ವ್ಯಥೆಯ ಕತೆಯನ್ನು ವಿವರಿಸುತ್ತಾಳೆ. ಪಾಪದ ಬೇರಿನ ಮೂಲಯಾವುದು 'ಹೊರಗೊ ಎನ್ನೊಳಗೂ ತನುವಿನೊಳೊ ಮನದೊಳೊ' ಎಂದು ಅರಸುವುದಕ್ಕೆ ಅಂಜುತ್ತಾಳೆ. ಇವೆಲ್ಲ ಸಾಧನೆಗಳೂ ಸಮುದ್ರದ ಪ್ರವಾಹದ ಎದುರು ಮರಳ ದಂಡೆಯಂತೆ, ಸಿಡಿಲಿಗೆ ಎದುರಾಗಿ ಕೊಡೆ ಹಿಡಿದಂತೆ, ಚಿಗುರದಿರಲೆಂದು ಚಿಗುರುವ ಮರಕ್ಕೆ ಹಚ್ಚಡ ಹೊಂದಿಸಿದಂತೆ ವಿಫಲ ಪ್ರಯತ್ನಗಳು. ಜೀವನವನ್ನು ಚಕಗುಳಿ ಇಟ್ಟು ಕುಂದಿಸುವ 'ಮಧುಕಣ'ವನ್ನು ವಿಧಿಯೇ ಸಂಚುಮಾಡಿ ಮಾನವನಲ್ಲಿಟ್ಟಿರುವಾಗ ಅದನ್ನು ನಿಂದಿಸುವರು ಧರ್ಮಾತ್ಮರೆ ? ಎಂದು ಅಹಲ್ಯೆ ಪ್ರಶ್ನಿಸುತ್ತಾಳೆ.

ಹಕ್ಕಿಗಳ ಕಂಠದಲ್ಲಿ, ಮೃಗಗಳಕಣ್ಣಿನಲ್ಲಿ. ಗಿಡ ಮರಗಳ ಚಿಗುರು ಹೂವಿನಲ್ಲಿ, ಬೀಸುವ ಗಾಳಿಯಲ್ಲಿ, ಹರಿಯುವ ಹೊನಲಿನಲ್ಲಿ ಅಷ್ಟೇ ಏಕೆ ಧರೆ ಗಗನದಲ್ಲಿ. ಹಬ್ಬಿ ಹರಿಯುವ ಮೋಹ ಪ್ರವಾಹದ ಬಲೆಯನ್ನು ಬೀಸಿಮಾಯೆ ಜೀವಗಳನ್ನು ಸೆರೆಯಾಗಿಸಲು ಹೊಂಚಿ ಕುಳಿತಿದ್ದಾಳೆ. ಆಕಾಶವನ್ನು ಒಂದನ್ನೊಂದು ಅಪ್ಪಿ ಕೂಡಲು ಕಾತರವಾಗಿವೆ, ಹೀಗೆ ವಿಶ್ವವ್ಯಾಪಿಯಾಗಿರುವ 'ಮೋಹಕ್ಕಿಣ್ಣ' ಮಾನವರನ್ನು ಪ್ರಚೋದಿಸದೇ

ಬಿಟ್ಟಿತೇ, ಋಷ್ಯಶೃಂಗ ಮತ್ತು ವಿಶ್ವಾಮಿತ್ರ ರಂಥ ತಪಸ್ವಿಗಳೇ ಮೋಹಕ್ಕೆ ಬಲಿಯಾದರು ಎಂದಮೇಲೆ ಸಾಮಾನ್ಯರ ಪಾಡೇನು ?

ಸೃಷ್ಟಿ ಯುಂತ್ರದ ಕಪಟ, ರಾಗ ಬೆಸನಗಳಘಭ
ರಕ್ತ ಮಾಂಸಗಳ ಹಟವೆಮ್ಮ ಪಾಡು।
ಆಕಪಟಕೀಡಾಗಿ ಜೀವ ತಾಂ ಬಡವಾಗಿ
ಬೇಡುವುದು ಬೇರೊಂದು ಜೀವ ಸಖನ ।
ತನುವ ತನುವೆಳೆಸುವುದು ಮನವ ಮನವೆಳೆಸುವುದು
ನಿಲಲಾರ ರೊರ್ತನ ದೊಳಾರು ಮಿಳೆಯೊಳ್ ।
ನಲ್ಮೆ ನೀಡುವಳೆಲ್ಲಿ ನೇಹ ಪಾಲಿಗನೆಲ್ಲಿ
ಎಲ್ಲಿ ಕೆಳೆಯೆನುತೆ ಬಾಯ್ಬಿಡುವ ರೆಲ್ಲರ್ ।

ಇಂಥ ದುರ್ಬಲರಾದ ಮಾನವರು ಪಾಪ ಸಾಗರ ಹಾಯ್ದು ಬಂದ ಸಾಹಸಿಗರೆಂದು ಕರುಣೆ ತೋರುವುದು ಶ್ರೀರಾಮನಂಥ ಪುಣ್ಯನಿಧಿಗೆ ಹೆಮ್ಮೆಯಲ್ಲವೇ ಎಂದು ಪ್ರಶ್ನಿಸುತ್ತಾಳೆ. ಅಹಲ್ಯೆಯ ವಿವರಣೆಯಲ್ಲಿ ತತ್ತ್ವ ಮತ್ತು ವಿಚಾರಕ್ಕಿಂತ ಕಾವ್ಯಮಯ ಸಂವೇದನೆಯೇ ಪ್ರಧಾನವಾಗಿರುವುದನ್ನು ಕಾಣಬಹುದಾಗಿದೆ. ಇಲ್ಲಿ ನೀತಿ ಅನೀತಿಯ ವಿಷಯ ತತ್ತ್ವವನ್ನು ಮೀರಿ ನಿಂತಿದೆ. ಅಹಲ್ಯೆ ಮತ್ತು ಮುಂದುವರೆದು ಯಾರು ದೇವತೆಗಳಿಗೆ ಒಡೆಯನೂ, ಹವಿಸ್ಸನ್ನು ಅರ್ಪಿಸಿಕೊಳ್ಳುವ ಅಧಿಕಾರಿಯೂ, ಧರೆಯ ಮಳೆ ಬೆಳೆಗೆ ಕಾರಣನೊ, ರಂಭೆ ಊರ್ವಶಿಯರೊಂದಿಗೆ ವಿಹರಿಸುವನೊ, ಮೂರು ಲೋಕದ ಸುಂದರಿಯಾದ ಶಚಿಯ ಪತಿ ಇಂದ್ರನೇ "ಅಂತಪ್ಪನೀ ಮಾನುಷಿಯ ನರಸಿ ಬೇಡಿ ಬರಲು ......ಸ್ವಸ್ವರೂಪದಿನೆ ನಾನ್ ಕೆಟ್ಟೆನಯ್ಯ" ಎಂದು ಶ್ರೀ ರಾಮನನ್ನು ಮುನಿಸು ಮಾತ್ಸರ್ಯದಿಂದ ಕೂಡಿದ ಮನುಜಭಾವದಿಂದ ಉದ್ಧರಿಸುವಂತೆ ಬೇಡುತ್ತಾಳೆ. ಅಹಲ್ಯೆಯ ಕರುಣಕತೆ ಶ್ರೀ ರಾಮನಿಗೆ ಅರ್ಥವಾಯಿತೊ ಇಲ್ಲವೊ ತಿಳಿಯದು. ಆದರೆ ಶ್ರೀ ರಾಮನು ಮಾತ್ರ ಮಾತೃಹೃದಯದಿಂದ ಕಣ್ಣಿನಲ್ಲಿಯೇ ತನ್ನ ಅಂತರಂಗದ ಭಾವವನ್ನು ಹೊರ ಸೂಚಿಸುತ್ತಾನೆ.

ಅಷ್ಟು ಹೊತ್ತಿಗೆ ಇಂದ್ರನೇ ಬಂದು 'ಪೇಳಲೆನಗದು ನಾಚ್ಚು ಪೇಳದಿರಲೆದೆ ಕಿಚ್ಚು' ಎನ್ನುತ್ತ ತಾನು ಪ್ರಣಯದ ಪ್ರಳಯಕ್ಕೆ ಸಿಕ್ಕಿ ಪತಿತನಾದ ಕತೆಯನ್ನು 'ಧರೆಯನಿನ್ನುಂ ಸೋಂಕದಾಗಸದ ಬಿಂದು ನೀನು' ನರಕಗಳಿನ್ನು ಮುಂಟದ ಕುಂದ ಮುಕುಳ ನೀನು' ಎಂದು ಶ್ರೀ ರಾಮನ್ನು ಸ್ತುತಿಸಿ ಸೃಷ್ಟಿ ಚಕ್ರಕ್ಕೆ ತಾನು ಬಲಿಯಾದ ಕತೆಯನ್ನು ವಿವರಿಸುತ್ತಾನೆ. ಇಂದ್ರನಿಗೆ ಶಚಿಯ ಮೋಹದಲ್ಲಿ ರುಚಿತೋರದಾಯಿತು. ರಂಭೆ ಊರ್ವಶಿಯರ

ಊಳಿಗ ಸೇವೆ ಯಾಂತ್ರಿಕವಾಯಿತು. ಅವನಿಗೆ ರುಚಿಭೇದ ಸವಿವ ಬಯಕೆ ತೀವ್ರಗೊಂಡಿತು. ಅಹಲ್ಯೆಯ ಮೋಹಕ್ಕೆ ಸಿಕ್ಕಿ ಇಂದ್ರನಿಗೆ ಅವಳಲ್ಲಿ ಕದ್ದು ನೋಡುವುದರಲ್ಲಿ ರುಚಿ ಸಿಕ್ಕಿತು. ಆದರೆ 'ಚಾರ್ಯ ಶೃಂಗಾರಾಲ ಜ್ವಾಲೆಯಿಂದೆನ್ನ ದೇವತ್ವ ಪೂಜತ್ವ ಬೂದಿಯಾಯ್ತು', ಕಣ್ಣೀರಿನಿಂದ ಆರ್ತಹೃದಯರಾಗಿ ಶ್ರೀ ರಾಮನ ಅನುಗ್ರಹವನ್ನು ಬೇಡುತ್ತಾನೆ. ಶ್ರೀ ರಾಮ ದರ್ಶನವೇ ಮುಕ್ತಿ ಎನ್ನುತ್ತಾನೆ ಇಂದ್ರ.

ಇಂದ್ರನ ಕತೆ ಮುಗಿಯುತ್ತಿದ್ದಂತೆಯೇ ಗೌತಮ ಋಷಿ ತಾನು ಎಡವಿದ್ದಕ್ಕಾಗಿ ಪಶ್ಚಾತ್ತಾಪ ಪಡುತ್ತ ಶ್ರೀ ರಾಮನಿಗೆ ತನ್ನ ಕತೆಯನ್ನು ವಿವರಿಸುತ್ತಾನೆ. ಆತ್ಮೋನ್ನತಿಗೆ ಸಾಧನೆಯಲ್ಲಿ ಕಣ್ಣು ಕಟ್ಟಿದ ಹಯವಾಗಿ, ಕೈಹಿಡಿದ ಹೆಂಡತಿಯನ್ನು ಕಡೆಗಾಣಿಸಿ, ಕಾರಣವಾದ ಅವಳ ಪ್ರಣಯದ ಗಾಯ ಸಹಜವಾದುದು ಎನ್ನುತ್ತಾನೆ.

ಶ್ರೀ ರಾಮ ವಿಶ್ವಾಮಿತ್ರನ ಕಡೆ ನೋಡುತ್ತಾನೆ. ಇಬ್ಬರ ಮನಸ್ಸೂ ಒಂದೇ ಆಗಿರುತ್ತದೆ. ವಿಶ್ವಾಮಿತ್ರನೂ ಹಿಂದೊಮ್ಮೆ ಇಂಥ ಮೋಹದ ಸುಳಿಗೆ ಸಿಕ್ಕಿ ಬಿದ್ದ. ಮತ್ತೆ ಎದ್ದು ಸಾಧನೆಯಿಂದ ಸಿದ್ಧಿ ಪಡೆದು ಮಹಾತ್ಮನಾದವನಲ್ಲವೆ? ಅವರನ್ನು ಕ್ಷಮಿಸುವುದಕ್ಕೆ ಸಂಪೂರ್ಣ ಒಪ್ಪಿಗೆ ಇದೆ. ಮತ್ತೊಮ್ಮೆ ವಿಶ್ವಾಮಿತ್ರ ಅಹಲ್ಯೆ ಗೌತಮ ಇಂದ್ರರ ಪಾಪದ ಮೂಲವನ್ನು ಧಾರ್ಮಿಕ ಪರಿಭಾಷೆಯಲ್ಲಿ ವಿಶ್ಲೇಷಿಸುತ್ತಾನೆ:–

ಪತಿಯುಪೇಕ್ಷೆಯು ಬಿತ್ತ, ಸತಿಯು ಪೇಕ್ಷೆಯುವೊಳಕೆ
ಯವ್ವನವೆ ಶಿಖಿಯುವಳ ಮನಸೆ ಮಯಣ ।
ವಶ್ಯಳಿವಳೆಂದು ಶಕ್ರನಿಗಾಯ್ತು ವಕ್ರಮತಿ
ಯದರಿಂದೆ ಋಷಿಯ ಜೀವ ಕೆಂಡವಾಯ್ತು ।
ಬ್ರಹ್ಮದಾಶನ ಗಾಳಕಿವರು ಮೀನಾದವರು
ಪ್ರಕೃತಿ ಸೂತ್ರದೆ ಕುಣಿದ ನಟಗಳಿವರು ।
ಲೋಗರೆಂತೀ ನಾಟಕವ ನೋಡಿ ನಗಲಹುದು
ಕಾಣರೇಂ ಸ್ಮರಕಿಣ್ವ ಬಲವನವರು ।

ಆದ್ದರಿಂದ ಮನ್ಮಥಾಬ್ಧಿಯನ್ನು ದಡದಲ್ಲಿ ನಿಂತು ನೋಡಿದವರು ಸಾಹಸಿಗರಲ್ಲ ಕಡಲಲ್ಲಿ ಮುಳಿಗಿ ಎದ್ದು ದಡ ಸೇರಿದವರು ಧೀಮಂತರು. 'ಜೀವ ನಿಶ್ರೇಣಿಯಲಿ ಪುಣ್ಯಪದವಿಯ ನಡರೆ' ಪಾಪವು ಒಂದು ಮೆಟ್ಟಿಲಾಗುತ್ತದೆ. ಕಾಲ ಗಾಯವನ್ನು ಮಾಯಿಸುತ್ತದೆ, ಮತ್ತೆ ಹಿಂದಿನ ನೆನಪನ್ನು ಬೇಡಿ, ಶುದ್ಧ ಜೀವನ ನಡೆಸಿ ಎಂದು ಅಂತ್ಯದಲ್ಲಿ :–



ಊದ್ರ

ಮರ್ತ್ಯ ಲೋಕ ದೊಳೆಲ್ಲ ಮನೆಗಳುಂ ಮಣ್ಣು ಕಲ್ಗಳ್
ಎಲ್ಲ ಮನೆಗಳು ಮೆಂದೊ ಬೀಳುವುವೆ ಅನಿತಿನಿತ್ತು
ಬೀಳ್ದ ಮನೆಯುಸು ಮರಳಿ ನಿಲಿಪುಡೆ ಪುರುಷಧರ್ಮಂ
ಶುದ್ಧರಾದಿರಿ ಲೋಕಯಾತ್ರೆಯಂ ಚರಿಸಿರಿನ್ನು

ಎಂದು ಗೌತಮ ಅವರಿಗೆ ಸಮಾಧಾನ ಹೇಳಿ ಮುಂದಿನ ಹೊಸ ಬಾಳಿಗೆ ಆತ್ಮವಿಶ್ವಾಸವನ್ನು ಮೂಡಿಸಿ ಹರಸುತ್ತಾನೆ. ಅಹಲ್ಯೆಯ ಪ್ರಸಂಗದಲ್ಲಿ ಪಾಪದ ಮೂಲ ಸ್ಪಷ್ಟವಾಗಿದ್ದರೂ, ಪಾಪಿಗಳಿಗೆ ಪಶ್ಚಾತ್ತಾಪದಿಂದ ಪರಿಶುದ್ಧವಾಗಿ ಹೊಸ ಬದುಕನ್ನು ಬಾಳುವ ಅವಕಾಶವಿರುವುದು ಮಾತ್ರ ಖಚಿತವಾಗುತ್ತದೆ. ವೈಯಕ್ತಿಕವಾದ ಪಾಪವನ್ನು ಸಾರ್ವತ್ರೀಕರಿಸಿ ಪಾಪದ ಮೂಲದ ದಿಕ್ಕನ್ನೇ ಬದಲಿಸುವ ತಾರ್ಕಿಕವಾದ ವಿವಾದ ತಾತ್ತ್ವಿಕ ವಿಶ್ಲೇಷಣೆಗೆ ಒಂದು ಸವಾಲಿನಂತಿದೆ. ಪ್ರಕೃತಿ, ವಿಧಿ, ದೇವತೆ, ದೇಹದ ಬಯಕೆ, ಕರ್ತವ್ಯ ವಿಮುಖತೆ–ಎಲ್ಲವೂ ಒಂದಲ್ಲ ಒಂದು ರೀತಿ ತಮ್ಮ ಕಾಣಿಕೆ ಸಲ್ಲಿಸಿವೆ, ಆದರೆ ಯಾರದ್ದು ಎಷ್ಟು ಪಾಲು ಎಂಬ ಮಾತು ಸ್ಪಷ್ಟವಾಗುವುದಿಲ್ಲ. ಇಂಥ 'ಮಗುಂ' ವ್ಯವಹಾರದಿಂದ ನಿಜವಾದ ಸತ್ಯ ಗೋಚರಿಸದೆ ತಾತ್ತ್ವಿಕ ಕಸರತ್ತಿನಿಂದ ಶಾಂತಿ ಮೂಡುವುದಾದರೂ ಹೇಗೆ ?

ರಾಮಾಯಣ ವಾಲಿಯ ಪ್ರಸಂಗ ಪ್ರಮುಖವಾದುದು. ಶ್ರೀ ರಾಮನಿಗೆ ಅದೊಂದು ನುಂಗಲಾರದ ತುತ್ತು. ಆದರೂ ಅನೇಕ ಮಂದಿ ಭಿನ್ನದೃಷ್ಟಿಯಿಂದ ಸಮಸ್ಯೆಯನ್ನು ಬಗೆಹರಿಸುವ ಪ್ರಯತ್ನವನ್ನು ಮಾಡಿದ್ದಾರೆ. ಡಿ. ವಿ. ಜಿ. ಯವರೂ ಅದೇ ಸಮಸ್ಯೆಯನ್ನು ತಾರೆಯ ಪ್ರಶ್ನೆಯಲ್ಲಿ ತಾತ್ತ್ವಿಕವಾಗಿ ಚಿಂತಿಸಿದ್ದಾರೆ. ತಾರೆ ಶ್ರೀರಾಮನಿಗೆ ಕೆಲವು ಮಾರ್ಮಿಕವಾದ ಪ್ರಶ್ನೆಗನ್ನು ಹಾಕುತಾಳೆ. ಅದರಲ್ಲಿ ಮುಖ್ಯವಾದದು ಹೆಂಗಸಿನ ಮಾನಕ್ಕೆ ಸಂಬಂಧಿಸಿದ ಪ್ರಶ್ನೆ ಗಮನ ಸೆಳೆಯುತ್ತದೆ :

ವಾಲಿರುಷೆಯರ ಕೆಳೆಯ ಪರಿಕಿಪನು ನೀನೇನು ?
ಭೂಲೋಕದೆಲ್ಲೊಲವುಗಳನು ಬಗೆದಿಹೆಯೇನು ?
ವಾನರನುವಧಿಪ ನಯ ಬೇರೆಯೆಂದೊರೆದನೀಂ
ವಾನರ ಪ್ರಣಯ ನಯ ಬೇರೆಯೆಂದರಿಯೆಯೇಂ ?

ಶ್ರೀ ರಾಮನಿಗೆ ವಾಲಿಯ ಪ್ರಸಂಗ ಜಿಗುಟಾಗುತ್ತದೆ. ಡಿ. ವಿ.ಜಿ.ಯವರು ಪಾತ್ರಗಳಿಂದ ಪ್ರಶ್ನೆ ಹಾಕಿಸುವಾಗ ಅತ್ಯಂತ ಮುಕ್ತವಾಗಿರುತ್ತಾರೆ. ಪಶ್ನೆಗಳು ಅರ್ಥಗರ್ಭಿತವಾಗಿರುತ್ತವೆ. ಅವಕ್ಕೆ ಅಷ್ಟೇ ಮುಕ್ತವಾದ ಉತ್ತರ ದೊರೆಯುತ್ತವೆಂದು ನಿರೀಕ್ಷಿಸಬಾರದು ಅಷ್ಟೆ. ತಾರೆ ಶ್ರೀ ರಾಮರಾಜಕಾರ್ಯದ ವಿಷಯವಾಗಿ ಅಷ್ಟಾಗಿ ತಲೆ ಕೆಡಿಸಿಕೊಳ್ಳುವುದಿಲ್ಲ. ಹೆಣ್ಣಿನ ವಿಷಯವಾಗಿ ಶ್ರೀರಾಮ ನಡೆದುಕೊಂಡ

ಬಗಗೆ ಬುಸುಗುಟ್ಟುತ್ತಾಳೆ, ಸಿಡಿಮಿಟಿಗೊಳ್ಳುತ್ತಾಳೆ. ಸೀತೆಯ ವಿಯೋಗ ದುಃಖದಿಂದ ಶ್ರೀ ರಾಮ ಪಕ್ಷಪಾತಿಯಾಗಿ ಅನೀತಿಯಿಂದ ವರ್ತಿಸಿದನೆಂದು ತಾರೆ ದೂರುತ್ತಾಳೆ. ಇಂದ್ರ ಅಹಲ್ಯೆಯರಿಗೆ ತೋರಿಸಿದ ಕ್ಷಮೆ ವಾಲಿರುಮೆಯರಿಗಿ ದೊರಕದಿರುವುದು ಏಕೆ? ಬೇರೆ ಬೇರೆ ಜನಾಂಗದವರ ಸಮಾಜದಲ್ಲಿ ಗಂಡು ಹೆಣ್ಣಿನ ಪ್ರೀತಿ ಭಿನ್ನಭಿನ್ನ ವಾಗಿರುವುದು ವಾಲಿಯನ್ನು ವಾನರನೆಂದು ಮೃಗವಾಗಿ ಪರಿಗಣಿಸಿ ಮರೆಯಲ್ಲಿ ನಿಂತು ಕೊಂದ ಶ್ರೀ ರಾಮನಿಗೆ ಅರ್ಥವಾಗಲಿಲ್ಲವೆ ಎಂದು ಸಾವಾಲನ್ನು ಹಾಕುತ್ತಾಳೆ. ರಾಮಾಯಣದಲ್ಲಿಯೂ ರುಮೆ ವಾಲಿಯ ಸಂಬಂಧದ ಶೀಲ ಅಶ್ಲೀಲದ ಸಮಸ್ಯೆ ಸಾರ್ವತ್ರಿಕವಾಗುವುದಿಲ್ಲ–ಸುಗ್ರಿವ ರುಮೆಯನ್ನು ಸ್ವೀಕರಿಸುವಾಗ ಯಾವ ಅವಳಶೀಲದ ಬಗ್ಗೆ ಅನ ಮಾನವನ್ನೂ ವ್ಯಕ್ತ ಪಡಿಸುವುದಿಲ್ಲ-ಅಥವಾ ರುಮೆ ವಾಲಿಯ ಆಶ್ರಯದಲ್ಲಿದ್ದುದಕ್ಕೆ ವ್ಯಥೆಪಟ್ಟು ಪಶ್ಚಾತ್ತಾಪಪಟ್ಟು ಸೀತೆಯ ಅಗ್ನಿಪ್ರವೇಶದಂಥಯಾವ ಧಾರ್ಮಿಕ ವಿಧಿಯ ಪರೀಕ್ಷೆಗೆ ಒಳಗಾಗುವುದಿಲ್ಲ.

ತಾರೆಯ ಪ್ರಶ್ನೆಗಳಿಗೆ ಶ್ರೀ ರಾಮ ಕೊಡುವ ಉತ್ತರ ಅಷ್ಟು ಸಮರ್ಪಕವಾಗಿ ಕಂಡುಬರುವುದಿಲ್ಲ. ಉತ್ತರದಲ್ಲಿ ನಿಂದಾಸ್ತುತಿಯ ತಂತ್ರವನ್ನು ಗುರುತಿಸಬಹುದು. ಸೀತೆಯ ಅಪಹರಣ, ಸುಗ್ರೀವನ ರಾಜ್ಯಚ್ಯುತಿ, ವಾಲಿಯವಧೆ—ಒಂದಕ್ಕೊಂದು ಸಂಬಂಧವಿಲ್ಲದ ಈ ಕಾರ್ಯಗಳು ಏಕೆ ಸಂಭವಿಸಿದುವು ? ದೈವ ಇವಕ್ಕೆ ತನ್ನನ್ನು ಕಲ್ಲಾಗಿ ಬಳಸಿಕೊಂಡಿತು ಎಂದು ಲೌಕಿಕ ಘಟನೆಗಳನ್ನು ಅಲೌಕಿಕ ವಿಧಿಯ ಕೊರಳಿಗೆ ಕಟ್ಟುವುದನ್ನು ಕಾಣಬಹುದಾಗಿದೆ. ರುಮೆಯನ್ನು ತಾನು ನಿಂದಿಸಲಿಲ್ಲ ಎಂದು ತಾರೆಯ ಪ್ರಶ್ನೆಯಲ್ಲಿ ಶ್ರೀ ರಾಮ ಸಮರ್ಥಿಸಿಕೊಂಡರೂ ಮುಂದೆ ಲೋಕಜೀವನದ ಪ್ರಶ್ನೆಯಲ್ಲಿ ರುಮೆಯ ಶಾಪವೇ ತಾನು ದಕ್ಕಿದ ಸೀತೆಯನ್ನು ಮತ್ತೆ ಎಂದೆಂದಿಗೂ ಸಿಕ್ಕದಂತೆ ಕಳೆದುಕೊಂಡು ವಿಧುರನಾಗಿ ದುಃಖಕ್ಕೆ ಕಾರಣವಾಯಿತೊ ಎಂದುಕೊಳ್ಳುವಾಗ ಶ್ರೀರಾಮನ ಈ ಸಂದರ್ಭದ ಮಾತು ಸಹೃದಯರಿಗೆ ಸಮರ್ಥನೀಯ ಎನ್ನಿಸದಿರದು. ಸಮಾನ ದುಃಖಿಯಾದ ಸುಗ್ರೀವನಿಗೆ ಅನುಕಂಪೆತೋರುವುದು ಅನೀತಿಯೇ ಎಂದು ತಾರೆಯನ್ನು ಕೇಳುತ್ತಾನೆ. ದುಂದುಭಿರಾಕ್ಷಸನನ್ನು ಕೊಂದು ಗವಿಯಿಂದ ಹಿಂತಿರುಗಿದ ವಾಲಿಗೆ ಸುಗ್ರೀವ ರಾಜ್ಯವನ್ನು ಒಪ್ಪಿಸಿದರೂ, ಅವನು ತಮ್ಮನ ಮೇಲೆ ಮಾತ್ಸರ್ಯವನ್ನೇ ಸಾಧಿಸಿ ರಾಜ್ಯಭ್ರಷ್ಟನನ್ನಾಗಿಸಿದನು. ಸಹೋದರ ಏಳ್ಗೆಯನ್ನು ಸಹಿಸದಾದ ವಾಲಿ ದಂಡಾರ್ಹನಾದನು. ದಂಡಾರ್ಹನಾದ ಯಾವ ಆಯುಧದಿಂದ ಶಿಕ್ಷಿಸಿದರೆ ತಾನೆ ಏನು? ತಾರೆಯ ಪ್ರಶ್ನೆಯಿಂದ ಶ್ರೀ ರಾಮನ ಮನಸ್ಸು ಶುದ್ಧವಾಯಿತು. ಶ್ರೀ ರಾಮನು ತಾಯರೆನ್ನು ಗುರು ಎಂದು ಕರೆಯುತ್ತಾನೆ. ವಾನರ ಮಾನವ ದಾನವ ಯಾರೇ ಆಗಲಿ ಯಾರ ದೃಷ್ಟಿ ಕುಟುಂಬಕಲ್ಯಾಣದಕ್ಕೆ ಮಿತಗೊಳ್ಳಬಹುದಾದಂತಹ ಸಂಕುಚಿತ

ಮನೋಭಾವವದಿಂದ ವರ್ತಿಸಿದಾಗ ತಿಳಿಸುತ್ತಾನೆ. ಕ್ಷಣ ಕ್ಷಣಕ್ಕೂ ವಿಧಿ ಒಡ್ಡುವ ನೂರಾರು ತಂತ್ರದ ಬಗ್ಗೆ ಮಾನವ ಸದಾ ಕಣ್ಣಲ್ಲಿ ಕಣ್ಣಿಟ್ಟು ಪ್ರತಿಯೊಂದನ್ನೂ ಪರೀಕ್ಷಿಸುವುದು ಸಾಧ್ಯವೆ ? ಅಥವಾ ಸಮರ್ಥನೇ ಅಂಥ. ಒಂದು ಎಚ್ಚರ ತಪ್ಪಿದ ಘಳಿಗೆಯಲ್ಲಿ ಅಚಾತುರ್ಯ ನಡೆದು ಹೋಯಿತು ಎನ್ನುತ್ತಾನೆ.

ಶ್ರೀ ರಾಮನ ಉತ್ತರ ಎಷ್ಟು ಸೂಕ್ತವಾದುದು ಎಂಬುದು ಪರಿಶೀಲನಾರ್ಹವಾದುದು. ದೈವ ತನ್ನನು ಕಲ್ಲಾಗಿ ಬಳಸಿಕೊಂಡಿತು, ಸಹೋದರ ದ್ವೇಷಿಯಾದ ವಾಲಿದಂಡನಾರ್ಹ. ದಂಡನೆಗೆ ಸಾಧನೆಯಾವುದಾದರೇನು, ಮೃತ್ಯು ಹತ್ತಿರವಾದವನಿಗೆ ಬುದ್ಧಿಯ ಮಾತು ವ್ಯರ್ಥ. ವಾಲಿ ಸತ್ತು ಮುಕ್ತನಾದ ತಾನೂ ಕ್ಷಣಕಾಲ ಸಂಕುಚಿತದಿಂದ ವರ್ತಿಸಿದೆ. ವಿಧಾತ ಒಡ್ಡುವ ತಂತ್ರಗಳಿಗೆ ಸದಾ ಮಾನವ ಎಚ್ಚರಿರಲು ಸಾಧ್ಯವೆ —ಎಂಬ ಮಾತುಗಳು ಕೇವಲ ಕಣ್ಣೀರೊರಸುವ ಮಾತುಗಳಾಗುತ್ತವೆ. ತಾರೆಯನ್ನು ವಾಲಿಯನ್ನು ಕೊನೆಗೆ ತನ್ನನ್ನೂ ಸ್ತುತಿಸಿ ನಿಂದಿಸಿಕೊಳ್ಳುವ ಶ್ರೀ ರಾಮ ನಿಂದಾಸ್ತುತಿಯ ಉತ್ತರ ಒಂದು ತಂತ್ರವಾಗಿ ಬರುತ್ತದೆಯೇ ಹೊರತು, ವಾಲಿಯನ್ನು ಕಳೆದುಕೊಂಡ ತಾರೆಯ ಕಣ್ಣೀರಿಗೆ ಕಣ್ಣೀರಿಟ್ಟು ಸಮಾಧಾನದಿಂದ ಕಣ್ಣೀರು ಬತ್ತಿಸುವ ಭಾವನಾತ್ಮಕ ಪರಿಸರವಾಗಿ ತಾತ್ತ್ವಿಕ ಚಿಂತನೆ ಅರಳುವುದಿಲ್ಲ. ಸೀತೆಯ ವಿಯೋಗದ ದುಃಖದ ಕಣ್ಣೀರಿಂದ ಮಡುಗಟ್ಟಿದ ಶ್ರೀರಾಮನಿಗೆ ಮತ್ತೊಬ್ಬರು ಸ್ಪಷ್ಟವಾಗಿ ಗೋಚರಿಸುವುದಾದರೂ ಹೇಗೆ ?

ಮಂಡೋದರಿಯ ಪ್ರಶ್ನೆ ತಾರೆಯ ಪ್ರಶ್ನೆಗಿಂತ ಭಿನ್ನವಾಗಿ ಕಂಡು ಬರದಿದ್ದರೂ ಅಹಲ್ಯೆ ಪ್ರಶ್ನೆಯ ಮತ್ತೊಂದು ತುದಿಯೇ ಆಗಿದೆ. ರಾಮಾಯಣದಲ್ಲಿ ರಾಮ ನಾಯಕನಾದರೆ ರಾವಣ ಪ್ರತಿನಾಯಕ. ರಾವಣ ಸಾಮಾನ್ಯನಲ್ಲ. ಶಿವನಿಂದ ವರ ಪಡೆದವನು, ಇಂದ್ರನನ್ನು ಗೆದ್ದವನು, ರಾಜರನ್ನು ನಡುಗಿಸಿದವನು. ಸಹೋದರಿ ಶೂರ್ಪಣಕಿಯ ಪ್ರೇರಣೆಯಿಂದ ಸೀತೆಯ ಮೋಹಕ್ಕೆ ಒಳಗಾಗಿ ವಧೆಯಾದವನು-ಮಂಡೋದರಿ ರಾಮನ ನಡತೆಯನ್ನು ಪ್ರಶ್ನಿಸುತ್ತಾಳೆ. ಡಿ,ವಿ.ಜಿ.ಯವರ ಅರ್ಥಗರ್ಭಿತವಾದ ಮಂಡೊದರಿಯ ಪ್ರಶ್ನೆಗಳಿಗೆ ಮೆಚ್ಚಲೇಬೇಕು :—

ಅಂದಿಂದ್ರ ಚಾಪಲವ ತೃಣವೆನಿಸಿದೌದಾರ್ಯ
ವಿಂದೆಂತು ದಶಶಿಕನಿಗಿಲ್ಲದಾಯ್ತು ।
ಸ್ಮರಕಿಣ್ವ ಸಹನೆಯ ಋಷ್ಯಾಶ್ರಮ ದೊಳಾದವೊಲು
ಲಂಕೇಶ ನೆಡೆಯೊಳೇಕಾಗದಾಯ್ತು ।
ದೇಹಪಾತಕಿಯಮರರಾಜ ಭಾಗ್ಯದೊಳುಳಿಯೆ
ಮನದ ಪಾತಕಿಗೇಕೆ ಮೃತ್ಯೆಯಾಯ್ತು ।

ಅನ್ಯನಪರಾಧಿಯಂ ಕ್ಷಮಿಸಿದಾನಿನ್ನ ನಯ
ನಿನ್ನಯಪರಾಧಿ ಗೆಂತಿಲ್ಲ ವಾಯ್ತು॥

ಇಂದ್ರನಿಗೆ ತೋರಿದ ಕರುಣೆ ರಾವಣನಿಗೇಕಿಲ್ಲವಾಯ್ತು ? ಆಶ್ರಮದಲ್ಲಿ 'ಸ್ಮರಕಿಣ್ವ' ಸಹಿಸುವುದಾದರೆ ಲಂಕೆಯಲ್ಲಿ ಸಾಧ್ಯವಿಲ್ಲವೆ ? ದೇಹ ಪಾತಕಿ ಜೀವಂತ ಬದುಕಿರುವಾಗ ಮನದ ಪಾತಕಿಗೆ ತಲೆದಂಡ ಅನಿವಾರ್ಯವೆ ? ಅನ್ಯ ಅಪರಾಧಿಯನ್ನು ಕ್ಷಮಿಸಿದವನು ನಿನ್ನಯ ಅಪರಾಧಿಯನ್ನು ಕ್ಷಮಿಸದಿರಲು ಕಾರಣವೇನು ? ಇವು ಮಂಡೋದರಿಯ ಮೂಲ ಭೂತವಾದ ಸಹಜ ಪ್ರಶ್ನೆಗಳು.

ಶ್ರೀ ರಾಮನ ಉತ್ತರ ತಾರೆಗೆ ಕೊಟ್ಟ ಉತ್ತರದ ಜಾಡನ್ನೇ ಹಿಡಿದಿದೆ. ತಾರೆ ಮಂಡೋದರಿಯ ಪ್ರಶ್ನೆಗಳು ಒಂದೇನಾಣ್ಯದ ಎರಡು ಮುಖಗಳು. ತಾರೆಯಲ್ಲಿ ಶತ್ರುತ್ವವೆ ? ನಿನ್ನ ವೈಧವ್ಯಕ್ಕಾಗಿ ಬಂದನೆ ? 'ದೈವ ಕಾರಾಗಾರ ನಿಗಳಯಂತ್ರಿತನಾಂ ಸ್ವತಂತ್ರನಲ್ತು' ಎಂದು ಯಾರಯಾರದ್ದೊ ಮೋಹದ ಬಲೆಯಲ್ಲಿ ತನ್ನನ್ನು ವಿಧಿ ಸಿಕ್ಕಿಸಿತು, ತಾನು ನಿಮಿತ್ತ ಮಾತ್ರ, ಸ್ತ್ರೀಯರ ಬದುಕಿನ ಹಿನ್ನೆಲೆಯ ವಿಭಿನ್ನ ಸಂಸ್ಕೃತಿಯ ಜನಾಂಗವನ್ನು ಕುರಿತು ಬಾಯಿಬಿಡುವುದಿಲ್ಲ. ಸೀತೆಯ ಚಿತ್ತಸ್ವಾತಂತ್ರವನ್ನು ಹರಣ ಮಾಡಿದ ರಾವಣ ಶಿಕ್ಷಾರ್ಹನೇ ಸರಿ. ಮಂಡೊದರಿಗೂ "ವಿಧಿ ವಿಕಟದನು ಚಿಂತೆಯೊಳೆ ಶಮವನರಸು ತಂಗೀ" ಎನ್ನುವ ರಾಮನ ಬುದ್ಧಿಯ ಮಾತು ತಲೆಗೆಲ್ಲಾ ಒಂದೇ ಮಂತ್ರದ ಗಾದೆಯ ಮಾತಿನಂತಿದೆ. ವಿಧಿಯಲ್ಲಿ ಶಾಂತಿಯನ್ನರಿಸಬೇಕು, ಅಥವಾ ತಾತ್ತ್ವಿಕದರಿವಿನಲ್ಲಿ ಶಾಂತಿಯನ್ನು ಅರಸಬೇಕೊ ಎಂಬ ಗೊಂದಲಕ್ಕೆ ಸಹೃದಯರು ಸಿಲುಕಿ ದಿಕ್ಕೆಡುವಂತಾಗುತ್ತದೆ. ಹಾಗಾದರೆ ವಿಧಿ ಮತ್ತು ತತ್ತ್ವಗಳು ಸಂವಾದಿಯಾವ ಕಲ್ಪನೆಗಳೇ ? ರಾಮ ಮುಂದಿನ ಮಾತಿನಲ್ಲಿ ಮತ್ತೂ ಗೊಂದಲ ಸೃಷ್ಟಿಯಾಗುತ್ತದೆ

ಸಾವಲ್ತಿದು ಮುಕ್ತಿ ; ದಶ
ಗ್ರಿವಾಕೃತಿ ಪಂಜರಾಂತರದೆ ಸಾಹಸದಾ ॥
ಜೀವಖಗಂ ದಿವಕಡರಿತು
ರಾವಣನೇಂ ಸ್ವಲ್ಪ ಬಲನೆ ? ನಿರುಪಮ ಸತ್ತ್ವಂ ॥

ಈ ಮಾತು ಶ್ರೀ ರಾಮನಿಗೆ ಅರ್ಪಿಸಿದ ಶ್ರದ್ಧಾಂಜಲಿಯ ಶಾಸನ. ರಾವಣನ ಸಾವು ಮುಕ್ತಿ ಹೇಗಾದಿತು ? ವಾಲಿ ಸತ್ತು ಸ್ವರ್ಗಸ್ಥನಾದಂತೆ, ರಾವಣ ಸತ್ತು ಮುಕ್ತಿ ಪಡೆಯುವುದಾದರೂ ಹೇಗೆ ? ಹಾಗಾದರೆ ಮತ್ತೆ ಶ್ರೀ ರಾಮ ಮುಕ್ತಿ ದಾಯಕನೆ ಎಂಬ ಪ್ರಶ್ನೆ ತಲೆ ಎತ್ತುತ್ತದೆ. ಮೋಹಕ್ಕೆ ಸಿಕ್ಕಿ ಮಾನವರಿಗೆ ಪಶ್ಚಾತ್ತಾಪ್ತ

ಅದೇ ಮೋಹಕ್ಕೆ ಸಿಕ್ಕಿದ ವಾನರು ಅಥವಾ ರಾಕ್ಷಸರಿಗೆ ಸಾವು ಎಂಬ ಎರಡು ರೀತಿಯ ಶಿಕ್ಷೆಯನ್ನು ಶ್ರೀ ರಾಮ ಒಂದೇ ರೀತಿಯ ತಪ್ಪಿಗೆ ಜಾರಿಗೆ ತರುವಲ್ಲಿ ತಾರತಮ್ಯ ಬಳಸಿದಂತಾಯಿತಲ್ಲವೆ ? ಹಾಗಾದರೆ ಶ್ರೀ ರಾಮ ಧರ್ಮಜ್ಞನಾಗುವುದಾದರೂ ಹೇಗೆ ? ಹನುಮಂತನ ಪ್ರಶ್ನೆಯಲ್ಲಿ ಶ್ರೀ ರಾಮನೇ ಕರ್ಮದ ಬೇರನ್ನು ತಾತ್ತ್ವಿಕ ಬೋಧನೆಯ ಚೂರಿಯಿಂದ ಕತ್ತರಿಸಬಹುದು ಎಂದು ಹನುಮಂತನಿಗೆ ಬೋಧಿಸುತ್ತಾನೆ ಹಾಗಾದರೆ ಪಶ್ಚಾತ್ತಾಪ ಮತ್ತು ಸಾವು ಎರಡೂ ಕರ್ಮವನ್ನು ಕತ್ತರಿಸುವ ಚೂರಿಗಳೇ ? ಇಂಥ ಸಮಸ್ಯೆಗಳಿಗೆ ದಾರಿಯಾಗಿ ಶ್ರೀ ರಾಮನ ತಾರ್ಕಿಕ ಬೋಧನೆ ದಾರಿತಪ್ಪುತ್ತದೆ. ಸತ್ಯ ಶೋಧನೆಗಿಂತ ಮತ್ತೂ ಕತ್ತಲುಕವಿಯುತ್ತದೆ.

ಸೀತೆಯ ಪ್ರಶ್ನೆಯಲ್ಲಿ ಸೀತೆ ಅಯೋಧ್ಯೆ ಬಿಟ್ಟು ಮತ್ತೆ ಹಿಂತಿರುಗಿದವರೆವಿಗೆ ನಡೆದು ಹೋದ ಘಟನೆಗಳನ್ನು ಸಮೀಕ್ಷಿಸುತ್ತಾಳೆ. ರಾಮ ನೊಂದಿಗೆ ಹಂಚಿಕೊಂಡ ಕಹಿ ಸಿಹಿಯ ನೆನಪನ್ನು ಮೆಲುಕುತ್ತಾಳೆ. ನಿನ್ನ ಪ್ರಜೆಯ ಸಂದೇಹ ಹೋಗಿಲ್ಲವೆ ? ಮತ್ತಾವ ಶೋಧನೆತನಗೆ ? ಕ್ಷುದ್ರ ನೊಬ್ಬನಿಗೆ ರಾಜ ಹೆದರುವುದೆ ? ರಾಜ ಸ್ವತಂತ್ರನಲ್ಲವೇ ಎಂದು ಸೀತೆ ರಾಮನಿಗೆ ಪ್ರಶ್ನೆಗಳ ಮಳೆ ಕರೆಯುತ್ತಾಳೆ.

ಸೀತೆಗೆ ರಾಮ ಕೊಡುವ ಉತ್ತರ ತಾರೆ ಮತ್ತು ಮಂಡೋದರಿಯ ಉತ್ತರಕ್ಕಿಂತ ಭಿನ್ನವಾಗುತ್ತದೆ. ಇಲ್ಲಿ ವಿಧಿಯನ್ನು ರಕ್ಷಣಾಕವಚವಾಗಿ ಬಳಸುವುದಿಲ್ಲ. ಹೇಗೂ ಕೈಹಿಡಿದ ಗಂಡನಲ್ಲವೆ ? ಪತಿಯ ಹಕ್ಕನ್ನು ಚಲಾಯಿಸಿ ಉತ್ತರಿಸುತ್ತಾನೆ. ಪ್ರಭುವಾಗಿ ಲೋಕ ಜನದ ಅಪವಾದದ ಗುರಾಣಿ ಹಿಡಿಯುತ್ತಾನೆ. ಲೋಕ ಹಿತಕ್ಕಾಗಿ ಕುಟುಂಬ ತ್ಯಾಗದ ಮಹತ್ವವನ್ನು ಬೋದಿಸುತ್ತಾನೆ. ಅಲ್ಲದೆ ಲಕ್ಷ್ಮಣನನ್ನು ಪ್ರೀತಿಸುವ ಊರ್ಮಿಳೆ ಇಲ್ಲವೆ ನಿನಗೆ ಕಾಡಿನ ಜೀವನ ಹೊಸದೆ ? ಅಪವಾದ ಬದುಕುವ ಹೆಂಗಸಿನ ಕಷ್ಟ ಅರಿಯುವುದಕಿಂತ ರಾಮ ಪ್ರಭುವಾಗಿ ಗಂಡನಾಗಿ ಹೆಣ್ಣಿನ ಕೊರಗಿಗೆ ಸೊಪ್ಪು ಹಾಕುವುದಿಲ್ಲ. ಸೀತೆ ರಾಮನ ಸಮಾಧಾನದ ಮಾತುಗಳಿಂದ ತೃಪ್ತಳಾಗದೆ ಬಾಯಿ ತೆರೆದು ಭೂಮಿಯಲ್ಲಿ ಅಡಗಿ ಹೋಗುತ್ತಾಳೆ. ಅಲ್ಲಿಂದ ಬರುವ ಶಬ್ದದಲ್ಲಿರುವ ರಾಮನ ಸ್ತುತಿ ಅಣಕವಾಗಿ ಕಾಣುತ್ತದೆ.

ಲೋಕ ಜನದ ಪ್ರಶ್ನೆಯಲ್ಲಿ ಜನರ ಪಶ್ಚಾತ್ತಾಪವಿದೆ. ಅಪವಾದ ಹೊರಿಸಿ ಸೀತೆಗೆ ಅನ್ಯಾಯ ಮಾಡಿರುವ ಕೊರಗಿದೆ. ಅದು ಅಂಥ ಕ್ಷುದ್ರ ವಿಷಯವನ್ನು ರಾಜನಿಗೆ ತಿಳಿಸಿ ಗೀತಾಪರಿತ್ಯಾಗಕ್ಕೆ ಕಾರಣನಾದ ದೂತನ ಮೇಲೆ ರೊಚ್ಚಾಗಿ ಸೇಡು ತೀರಿಸಿಕೊಳ್ಳುಲು ಪರಿತಪಿಸಿ ದೂತನನ್ನು ಸೆರೆ ಹಿಡಿದು ನಿಲೆ ಹಾಕುತ್ತದೆ. ದೂತ ತನ್ನ ಕರ್ತವ್ಯ ನಿರ್ವಹಿಸಿರುವುದಾಗಿಯೂ ಆದರೆ ವಿಷ ಬೀಜ ಬಿತ್ತಿ ಅನಾಹುತಕ್ಕೆ

ಕಾರಣರಾದವರು ಜನರೇ ಎಂದು ತಿರುಗು ಬಾಣಬಿಡುತ್ತಾನೆ.

ಹನುಮಂತನ ಪ್ರಶ್ನೆಯನ್ನು ಈಗಾಗಲೇ ದೀರ್ಘವಾಗಿ ಚರ್ಚಿಸಲಾಗಿದೆ. ಹನುಮಂತನ ಪ್ರಶ್ನೆಯಲ್ಲಿ ಮಾನವನ ಆತ್ಮ ತತ್ತ್ವ ವಿಕಾಸದ ಚಿತ್ರವಿದೆ. ಶ್ರೀ ರಾಮನು ವಸಿಷ್ಠರಿಂದ ಕಲಿತು ಅನುಷ್ಠಾನದಲ್ಲಿ ತೊಡಗಿದಾಗ ಉಂಟಾದ ಅನುಭವನ್ನು ಹನುಮಂತನಿಗೆ ಭೋಧಿಸುತ್ತಾನೆ. ಇಲ್ಲಿ ವೇದಾಂತದ ಸಮನ್ವಯ ತತ್ವವನು ವೃಕ್ಷದ ಉಪಮೇಯಿಂದ ನಿರೂಪಿಸುತ್ತಾನೆ.

ಅಹಲ್ಯೆ, ತಾರೆ ಮಂಡೋದರಿ ಮತ್ತು ಸೀತೆ—ಇವರ ಪಂಚ ಪತಿರ್ವತೆಯಲ್ಲಿ ನಾಲ್ವರು ಶ್ರೀ ರಾಮನ ವ್ಯಕ್ತಿತ್ವವನ್ನು ಒರೆ ಹಚ್ಚುತ್ತಾರೆ. ಪ್ರಶ್ನೋತ್ತರಗಳನು ವಿಸ್ತಾರವಾಗಿ ಪರಿಶೀಲಿಸಲಾಗಿದೆ. ರಾಮಾಯಣದಲ್ಲಿ ಬರುವ ಸಮಸ್ಯೆಗಳಿಗೆ ಇಲ್ಲಿ ಬರುವ ಉತ್ತರವೊ ಸಮಾಧಾನ ಕೊಡುವುದಿಲ್ಲ. ಸಾಮಾಜಿಕ ಘಟನೆಗಳನ್ನು ಆಧ್ಯಾತ್ಮೀಕ ವಲಯದಲ್ಲಿ ಚರ್ಚಿಸುತ್ತ ಪರಿಹಾರ ಸೂಚಿಸುವ ದೋಷದಿಂದ ಸಮಸ್ಯೆಗಳ ಸ್ಥಾಯಿಯಾಗಿವೆ.

ಮೋಹ ಹೆಣ್ಣುಗಂಡಿಗೆ ಮೀಸಲಾದುದು. ಅದು ವರ್ಗ, ವರ್ಣ, ವಯಸ್ಸು, ವಿದ್ಯೆಯ ಅಂತರವನ್ನು ಸಾಮಾಜಿಕ ಕಟ್ಟು ಕಟ್ಟಲೆಯನ್ನು ಮೀರಿನಿಲ್ಲುವುದು. ಆದರೆ ಇಲ್ಲಿ ಬರುವ ಗೃಹಸ್ಥ ಜೀವನದ ಪ್ರಣಯ ವರ್ಗ, ವರ್ಣ ಮತ್ತು ಸಮಾಜವನ್ನು ಮೀರಿನಿಲ್ಲುವುದಿಲ್ಲ-ಲೌಕಿಕದ ಎಲ್ಲ ಕಟ್ಟು ಕಟ್ಟಲೆಗೂ ಬದ್ಧವಾದುದು. ರಾಮಾಯಣವಲ್ಲಿ ಮಾನವ, ವಾನರ ಮತ್ತು ರಾಕ್ಷಸ ಸಂಸ್ಕೃತಿಯ ವರ್ಣನೆ ಬರುತ್ತದೆ. ಅಲ್ಲಿ ಬರುವ ಮಾನವ ಸಂಸ್ಕೃತಿ ಆರ್ಯ ಸಂಸ್ಕೃತಿಯೇ ಆಗಿರುತ್ತದೆ. ವಾನರ ಮತ್ತು ರಾಕ್ಷಸ ಸಂಸ್ಕೃತಿ ಪರಸ್ಪರ ಹತ್ತಿರವಾಗಿದ್ದು ದ್ರಾವಿಡ ಸಂಸ್ಕೃತಿಯೇ ಆಗಿವೆ. ಕ್ಷತ್ರಿಯನಾದ ರಾಮ ಆರ್ಯ ಸಂಸ್ಕೃತಿಗೆ ಸೇರಿದವನು. ಆರ್ಯ ಸಂಸ್ಕೃತಿಯ ರಕ್ಷಣೆಯ ಜವಾಬ್ದಾರಿ ಶ್ರೀ ರಾಮನದು, ಆರ್ಯ ಸಂಸ್ಕೃತಿ ಎಂದರೆ ವೈದಿಕ ಸಂಸ್ಕೃತಿ ವೈದಿಕ ಸಂಸ್ಕೃತಿ ವರ್ಣಾಶ್ರಮ ಧರ್ಮವನ್ನು ಬಳಸಿಗೊಂಡಿದೆ. ಅಂಥವರ್ಣಾಶ್ರಮ ಧರ್ಮಕ್ಕೆ ಚ್ಯುತಿ ಬರದಂತೆ ನಡೆದು ಕೊಂಡು ರಕ್ಷಿಸುವುದು ಕ್ಷತ್ರಿಯನಾದ ಶ್ರೀರಾಮನ ಕರ್ತವ್ಯ. ಶ್ರೀರಾಮ ಆದರ್ಶ ಮಾನವನಾದರೂ ಅವನು ರಕ್ಷಣೆಯ ಭಾರ ಹೊತ್ತದ್ದು ವರ್ಣಾಶ್ರಮಧರ್ಮ ಸಂರಕ್ಷಣೆಯನ್ನು ಎಂದು ಮರೆಯಬಾರದು. ಇಂದ್ರ ಅಹಲ್ಯೆ ಯನ್ನು ಮೋಹಿಸುವುದು ಅಂಥ ದೊಡ್ಡ ಅಪರಾಧವಲ್ಲ. ಆದರೆ ರಾವಣ ರಾಮನ ಪತ್ನಿಯನ್ನು ಮೋಹಿಸುವುದು ದೊಡ್ಡ ಅಪರಾಧವಾಗುತ್ತದೆ. ಉತ್ತಮ ವರ್ಗದ ಪುರುಷ ತನ್ನ ವರ್ಗದ ಅಥವಾ ತನಗಿಂತ ಕೆಳಗಿನ ವರ್ಗದ ಸ್ತ್ರೀಯನ್ನು ಮೋಹಿಸು

ಪ್ಪದು. ಆದರೆ ಕೆಳಗಿನ ವರ್ಗದ ಪುರುಷ ಉತ್ತಮ ವರ್ಗದ ಸ್ತ್ರೀಯರನ್ನು ಮೋಹಿಸುವುದು ಮಹಾ ಅಪರಾಧವಾಗುತ್ತದೆ. ಅದು ಸ್ಮೃತಿಕಾರರ ಅನುಲೋಮ ಪ್ರತಿಲೋಮ ವಿವಾಹ ಪದ್ಧತಿಯ ನಿಯಮವನ್ನೇ ಗಂಡು ಹೆಣ್ಣಿನ ಪ್ರೇಮಕ್ಕೂ ಅನ್ವಯವಾಗುವುದು ಕಂಡು ಬರುತ್ತದೆ.

ರಾಮ ವರ್ಣಾಶ್ರಮ ಧರ್ಮ ಸಂರಕ್ಷಕನಾದುದರಿಂದ ಪ್ರತಿಲೋಮ ಪ್ರಣಯಕ್ಕೆ ಸಿಕ್ಕಿದ ರಾವಣನನ್ನು ವಧಿಸುವುದು ಅನಿವಾರ್ಯವಾಗುತ್ತದೆ. ಅಲ್ಲದೆ ಅದು ಕ್ಷತ್ರಿಯ ಧರ್ಮವೂ ಆಗಿರುತ್ತದೆ. ಇವರಲ್ಲಿ ನೀತಿಗಿಂತ ಹೆಚ್ಚಾಗಿ ವರ್ಣಾಶ್ರಮಧರ್ಮದ ತತ್ತ್ವ ಮುಖ್ಯವಾದುದು. ಅಪಹರಿಸಲ್ಪಟ್ಟ ಸೀತೆ ಕೇವಲ ಹೆಣ್ಣಲ್ಲ. ಅವಳು ಒಂದು ವರ್ಣ ಸಂಸ್ಕೃತಿಯ ಪ್ರತೀಕ. ವರ್ಣ ಸಂಸ್ಕೃತಿಗೂ ರಾಕ್ಷಸ ಸಂಸ್ಕೃತಿಗೂ ಘರ್ಷಣೆ ಅನಿವಾರ್ಯ. ಆದ್ದರಿಂದ ರಾವಣ ವಧೆಯಲ್ಲಿ ನೀತಿ ಅನೀತಿಯ ಪ್ರಶ್ನೆ ಉದ್ಭವವಾಗುವುದಿಲ್ಲ. ಅಹಲ್ಯೆ ಇಂದ್ರರ ವಿಷಯದಲ್ಲಿಯಾದರೂ ಅನುಲೋಮಪದ್ಧತಿ ಅನ್ವಯವಾಗಿ ಅಲ್ಲಿಯ ಪ್ರಣಯ ವೈದಿಕಧರ್ಮದಲ್ಲಿ ಮಾನ್ಯವಾಗಿ ಸಮರ್ಥಿತವಾಗುತ್ತದೆ. ಆದ್ದರಿಂದಲೆ ಅಹಲ್ಯೆಯನ್ನು ಗೌತಮ, ಸೀತೆಯನ್ನು ಶ್ರೀ ರಾಮ ಮತ್ತೆ ಸ್ವೀಕರಿಸುವುದು ಧರ್ಮವಿರೋಧಿ ಯಾಗುವುದಿಲ್ಲ, ಅಹಲ್ಯೆ ಇಂದ್ರನನ್ನು ಒಪ್ಪುವಲ್ಲಿ, ಸೀತೆ ರಾವಣನನ್ನು ತಿರಸ್ಕರಿಸುವಲ್ಲಿ ವರ್ಣ ಧರ್ಮದ ಪ್ರಶ್ನೆ ಅಡಕವಾಗಿದೆ. ಅಹಲ್ಯೆಯ ಪ್ರಸಂಗದಲ್ಲಿ ಶ್ರೀ ರಾಮ ಕ್ಷಮೆ ತೋರಿಸಿದಂತೆ ಮಂಡೋದರಿಯ ಪ್ರಸಂಗದಲ್ಲಿ ರಾವಣನಿಗೆ ಕ್ಷಮೆ ಅಸಾಧ್ಯ. ಯಾವ ಧರ್ಮ ಶ್ರೀ ರಾಮನಿಂದ ಶೂದ್ರ ತಪಸ್ವಿಯನ್ನು ವಧೆ ಮಾಡಿಸಿತೋ ಅದೇ ಕಾರಣವಾಯಿತು. ಅಹಲ್ಯೆಯ ಪ್ರಸಂಗದಲ್ಲಿ ಮಾನವ ಸ್ವಭಾವವನ್ನು ಮನ ಶ್ಶಾಸ್ತ್ರೀಯವಾಗಿ ವೈದಿಕ ಸಮಾಜದ ಹಿನ್ನೆಲೆಯಲ್ಲಿ ವಿಶ್ಲೇಷಿಸಿದಂತೆ ತಾರೆ ಮತ್ತು ಮಂಡೋದರಿ ಪ್ರಸಂಗಗಳನ್ನು ವಿವರಿಸುವುದು ಸಾಧ್ಯವಾಗದು. ಆದರೆ ವಾನರ ಮತ್ತು ರಾಕ್ಷಸ ಸಂಸ್ಕೃತಿಯ ಧರ್ಮವನ್ನೇ ವೈದಿಕ ಸಂಸ್ಕೃತಿಯ ಧರ್ಮವೆಂದು ಭ್ರಮಿಸಿ ಎರಡೂ ಸಂಸ್ಕೃತಿಯ ನೀತಿ ಮೌಲ್ಯಗಳು ಒಂದೇ ಎಂಬ ತಪ್ಪು ತಿಳಿವಳಿಕೆಯಿಂದ ಸಮಸ್ಯೆಗಳು ಸಂಕೀರ್ಣಗೊಂಡಿವೆ. ಶ್ರೀ ರಾಮನ ಕಲ್ಪನೆಗೂ ಮತ್ತು ವೈದಿಕ ಸಂಸ್ಕೃತಿಯ ವರ್ಣಧರ್ಮ ರಕ್ಷಕ ಶ್ರೀರಾಮನ ಕಲ್ಪನೆಗೂ ಪರಸ್ಪರ ವಿರೋಧವಲ್ಲದಿದ್ದರೂ, ಸಾಮಾಜಿಕ ಹಿನ್ನೆಲೆಯಲ್ಲಿ ಮಾತ್ರ ಪರಸ್ಪರ ತಪ್ಪಿನಿಂದ ಕೆಲವು ಸಮಸ್ಯೆಗಳು ಉದ್ಭವವಾಗುತ್ತವೆ. ಅಹಲ್ಯೆ ಪ್ರಶ್ನೆಗೂ ತಾರೆ ಮಂಡೋದರಿ ಪ್ರಶ್ನೆಗೂ ಸಂಬಂಧವಿಲ್ಲ. ವ್ಯಕ್ತಿಗಳ ಸಮಾಜಿಕ ಹಿನ್ನೆಲೆಯ ಪರಿಶೀಲನೆಗಿಂತ ವ್ಯಕ್ತಿಗಳ ಸ್ವಭಾವವನ್ನು ವಿಶ್ಲೇಷಿಸುವುದು ದಾರಿ ತಪ್ಪುವುದಕ್ಕೆ ಕಾರಣವಾಗಿದೆ. ವ್ಯಕ್ತಿಗಳ ಸ್ವಭಾವ ಅರಿಯಲು ಅವರು ಸೇರಿದ ಸಮಾಜದ ಸ್ವಭಾವವನ್ನು ಅರಿಯುವುದು ಅತ್ಯಗತ್ಯ.

ಆದರೆ ವಾಲಿಯ ವಧೆ ಮಾತ್ರ ಎಂದೆಂದೂ ಒಂದು ಸಮಸ್ಯೆಯಾಗಿಯೇ ಉಳಿಯುತ್ತದೆ. ಒಬ್ಬ ಸಹೋದರ ಮತ್ತೊಬ್ಬ ಸಹೋದರನ ಹೆಂಡತಿಯನ್ನು ಪ್ರೀತಿಸುವುದು ವಾನರ ಸಂಸ್ಕೃತಿಯ ಧರ್ಮ ವಿರೋಧಿಯಾದಲ್ಲಿ ರುಮೆಯ ವಾಲಿಯರ ಸಂಬಂಧದಲ್ಲಿ ಶೀಲ ಅಶ್ಲೀಲದ ಸಮಸ್ಯೆ ಉದ್ಭವವಾಗುವುದಿಲ್ಲ. ರಾವಣ ಸುಗ್ರೀವನ ಸ್ನೇಹಕ್ಕಾಗಿ ವಾಲಿಯನ್ನು ಮರೆಯಲ್ಲಿ ನಿಂತು ಮೋಸದಿಂದ ಕೊಂದದ್ದು ಮಾತ್ರ ಸತ್ಯ. ದರ್ಮರಕ್ಷಣೆಗಾಗಿ, ಲೋಕಸಂಗ್ರಕ್ಕಾಗಿ (ವೈದಿಕ ಲೋಕ) ಕೆಳವರ್ಗದವರನ್ನು ಹೇಗಾದರೂ ಬಳಸಿಕೊಳ್ಳುವುದು ಅಥವಾ ಕೊಲ್ಲುವುದು ವರ್ಣಾಶ್ರಮ ಧರ್ಮದ ವಿರೋಧವಾಗುವುದಿಲ್ಲ. ಅಲ್ಲದೆ ರಾಜತಾಂತ್ರಿಕ ಕಾರ್ಯಕ್ಕಾಗಿ ವಾಲಿಯ ವಧೆ ಅನಿವಾರ್ಯವಾಯಿತೆಂದು ಸಮರ್ಥಿಸಿಕೊಳ್ಳಬಹುದು. ಆದರೆ ಮರೆಯಲ್ಲಿ ನಿಂತು ಮೋಸದಿಂದ ಕೊಂದದ್ದು ಮಾತ್ರ ರಾಮನನ್ನು ತಲೆತಗ್ಗಿಸುವಂತೆ ಮಾಡಿತು. ಅಲ್ಲದೆ ಅದೇ ರಾವಣ ನೊಡನೆ ಯುದ್ಧ ಮಾಡುವಾಗ, ರಾವಣನಿಗೆ ದಣಿವಾಗಿ ತಬ್ಬಿಬ್ಬಾದಾಗ ರಾಮನಿಗೆ ಯುದ್ಧ ನಿಲ್ಲಿಸಿ ಬಿಡಾರಕ್ಕೆ ಹೋಗಿ ವಿಶ್ರಾಂತಿ ತೆಗೆದು ಕೊಂಡು ಹೊಸ ಆಯುಧಗಳಿಂದ ಸಜ್ಜಾಗಿ ಬರುವಂತೆ ಹೇಳುವ, ತನ್ನ ಬಲದಲ್ಲಿ ಆತ್ಮ ವಿಶ್ವಾಸವುಳ್ಳ ರಾಮನೆಲ್ಲಿ, ಹೇಡಿಯಂತೆ ಮರದ ಹಿಂದೆ ನಿಂತು ಬಾಣ ಬಿಡುವ ರಾಮನೆಲ್ಲಿ ! ವಾಲಿಗೆ ವರವಿತ್ತು ಶತ್ರುಗಳು ಅವನ ಮುಂದೆ ನಿಂತಾಗ ಅರ್ಧಶಕ್ತಿ ವಾಲಿಗೆ ಹೋಗುತ್ತಿತ್ತು ಎಂಬುದು ರಾಮನ ವಾಲಿವಧೆಗೆ ಸೂಕ್ತ ಸಮರ್ಥನೆಯಾಗಲಾರದು. ಪುರಾಣದಲ್ಲಿ ಬರುವ ವರಮತ್ತು ಶಾಪಗಳು ಆತ್ಮಗೌರವ ರಕ್ಷಣೆಗೆ ಸಂದರ್ಭೋಚಿತವಾಗಿ ಹೊಂದಾಣಿಕೆ ಮಾಡಿ ಕೊಳ್ಳಲು ಬಳಸುವ ದುರ್ಬಲರ ಆಯುಧಗಳು.

ಕೊನೆಯದಾಗಿ ಸೀತೆಯ ಅಂತ್ಯ ಸರಿಯೇ ಎನ್ನಿಸುತ್ತದೆ. ದ್ರಾವಿಡ ಸಂಸ್ಕೃತಿಯ ವಿಧಿಯಂತೆ ಅಗ್ನಿ ಪರೀಕ್ಷೆಯಿಂದ ಪವಿತ್ರಳೆಂದು ಲೋಕಕ್ಕೇ ಗೊತ್ತಾದ ಸೀತೆಯ ಶೀಲವನ್ನು ಉತ್ತರದ ಆರ್ಯ ಸಂಸ್ಕೃತಿಯ ಜನಪದ ಅನುಮಾನದಿಂದ ನೋಡಿ ರಾಮನಿಂದ ಸೀತೆಯನ್ನು ತ್ಯಾಗಮಾಡಿಸುವುದು ದ್ರಾವಿಡ ಸಂಸ್ಕೃತಿಯ ವಿರುದ್ಧದ ಸೇಡಿನ ಸಂಕೇತವಾಗಿದೆ. ಸೀತೆ ರಾಮನನ್ನು ತಿರಸ್ಕರಿಸುವುದು ಆರ್ಯ ಸಂಸ್ಕೃತಿಯ ವಿರುದ್ಧ ಪ್ರತಿಭಟನೆಗೆ ಸಾಕ್ಷಿಯಾಗಿದೆ.

---

"ಚಿಂತಿಸುತಿಹೆ ಅವನ ಇವನ
ಕಾಣ ತೆರೆದ ಹೃದಯ ಭವನ
ಬಾಡಬೇಡ ದವನದಂತೆ
ಮುಗಿಯ ಬಹದು ಬೇಗಕಂತೆ
ಕಂಪಿಗೆ ಗರಿ ಮೂಡಿದಂತೆ"

—ಬೇಂದ್ರೆ

# ಗಾಂಧಿಯ ಇನ್ನೊಂದು ಅವತಾರ

—ಜಿ. ಎಸ್. ನಾಗೇಂದ್ರ

ಬುದ್ಧಿವಂತರು ತಾಕಲಾಡುವ ಕಾಕ್‌ಟೇಲ್ ಪಾರ್ಟಿಗಳಲ್ಲಿ ; ಡನ್‌ಹಿಲ್ ಸಿಗರೇಟುಗಳ ಧೂಮ ಪೈನ್ ವಿಸ್ಕಿಗಳ ನೊರೆಗಳ ಜೊತೆ ಗಾಳಿಯಲ್ಲಿ ಲೀನವಾಗುವ ಮೋಜಿನ ಗಳಿಗೆಗಳಲ್ಲಿ ; ಲೇಖಕರು, ಕಲಾವಿದರು, ಜಾಹಿರಾತು ಮನುಷ್ಯರು ಅಪೂರ್ವ ಸತ್ಯಗಳನ್ನು ಶೋಧಿಸುವಲ್ಲಿ ; ಎಲ್ಲ ವಯಸ್ಸುಗಳ ಗಂಡು ಹೆಣ್ಣುಗಳ ಸಾಮೂಹಿಕ ನಿರ್ವಾಣವನ್ನು ಹುಡುಕುತ್ತಾ ಕುಣಿಯುವ ಜಾಗಗಳಲ್ಲಿ :—ಈ ತರಹೆಯ ಎಲ್ಲ ಶ್ರೀಮಂತ ಕೂಟಗಳಲ್ಲಿ ಗಾಂಧಿ ಚರ್ಚೆಯ ವಿಷಯವಾಗಿದ್ದಾನೆ,

ಆಟೆನ್‌ಬರೋ ಗಾಂಧಿಯನ್ನು ಇದ್ದಕ್ಕಿದ್ದ ಹಾಗೆ ಪ್ರಸ್ತುತ ಮಾಡಿದ ನಂತರ ಜನ ತಮ್ಮ ಗಾಂಧಿಯನ್ನು ತಾವೇ ಹುಡುಕುತ್ತಿದ್ದಾರೆ.

ಸಮುದ್ರದಂಚಿನ ವರ್ಲಿ (ಮುಂಬಯಿ)ಯ ಎತ್ತರದ ಕಟ್ಟಡದಲ್ಲಿ ಒಂದು ಪಾರ್ಟಿ ನಡೆದಿತ್ತು. ಮಂದ ಬೆಳಕಿನ ಮಹಡಿಯ ಮೇಲೆ ಕೊರೆಯುವ ಗಾಳಿಯನ್ನು ಎದುರಿಸಿ ವಿವಿಧ ರೀತಿಯ ಜನ ಕಲೆತಿದ್ದರು. ಒಂದು ಹೆಣ್ಣಿನ ಜೋರಾದ ಕುಕಿಲು ಸಂಭಾಷಣೆಯ ಏಕತಾನವನ್ನು ಆಗಾಗ ಮುರಿಯುತ್ತಿತ್ತು. ಯಶಸ್ವೀ ಜಾಹಿರಾತು ಮನುಷ್ಯನ ನಿರ್ದಿಷ್ಟ, ಮೊನಚು ಮಾತುಗಳು ಪಟಪಟನೆ ಉದುರುತ್ತಿದ್ದುವು.

ಆತ ಹೇಳುತ್ತಿದ್ದ : "ಗಾಂಧಿಯ ಎಲ್ಲ ಪುಸ್ತಕಗಳನ್ನು ಕೊಳ್ಳಬೇಕೆಂದು ನಾನು ಮನಸ್ಸು ಮಾಡಿದ್ದೇನೆ...ಸ್ವದೇಶಿ ಮಿಲ್ಲುಗಳಿಗಾಗಿ ನಾನು ಮಾಡುವ ಕೆಲಸಕ್ಕೆ ಆತನನ್ನು ಸರಿಯಾಗಿ ಉಪಯೋಗಿಸಿಕೊಳ್ಳಬೇಕೆಂದಿದ್ದೇನೆ....ಎಲೆಕ್ಟ್ರಾನಿಕ್ ಚರಕಾ ಉಪಯೋಗಿಸುತ್ತಿರುವ ಆತನ ಚಿತ್ರ ಇಲ್ಲವೆ ಕಂಪ್ಯೂಟರ್‌ನತ್ತ ಹಂಗಿಸಿ ನೋಡುತ್ತಿರುವ ಅವನ ಭಂಗಿ ಅಥವಾ....ಇನ್ನೂ..."

ಉದ್ದನೆಯ ಕೂದಲಿನ ಪ್ರೊಫೆಸರ್ ಒಬ್ಬರು ತಮ್ಮ ಪೈಪಿನಿಂದ ದೀರ್ಘವಾಗಿ ಎಳೆದು, "ಅವನ 'ಸತ್ಯದ ಅನುಭವಗಳು' ಓದಿದೆ; ಅಬ್ಬ, ನಮ್ಮನ್ನು ಚಿಂದಿ ಮಾಡಿಬಿಡುತ್ತದೆ, ಅದು." ಪಕ್ಕದಲ್ಲಿದ್ದ ಮೆದು ಮನುಷ್ಯ..."ಹಾಗಲ್ಲ, ಪುಸ್ತಕದ ಹೆಸರು 'ಸತ್ಯದ ಜೊತೆ ನನ್ನ ಅನುಭವಗಳು...'ಎಂದು...." ಅದಕ್ಕೆ ಪ್ರೊಫೆಸರ್, "...ಹೌದು,

ಹೌದು. ಅದನ್ನೂ ಓದುತ್ತಿದ್ದೇನೆ. ನನ್ನ ಪುಸ್ತಕಗಳ ರಾಶಿಯಲ್ಲಿ ಅದೂ ಬಿದ್ದಿರಲಿ..." ಎಂದರು.

ಮಧ್ಯೆ ಬಾಯಿ ಹಾಕಿದ ಗಿರಣಿ ಮಾಲೀಕನ ಮಡದಿಯೊಬ್ಬಳು ಹೇಳಿದಳು : "ನೀವೇನೇ ಹೇಳಿ...ಗಾಂಧಿ ಹಾಕಿದ ಬಟ್ಟೆ ಏನಾದರೂ ಫ್ಯಾಷನ್ ಆಗಿದ್ದಿದ್ರೆ ನಮ್ಮ ವ್ಯಾಪಾರ ಹಾಳಾಗ್ಹೋಗ್ತಿತ್ತು..." ಕೆಲವು ಅಸಂತುಷ್ಟ ದೃಷ್ಟಿಗಳನ್ನು ತಪ್ಪಿಸಿಕೊಳ್ಳುತ್ತ ಮುಂದುವರೆಸಿದಳು..." ಆದರೆ ಆತ ಮಹಾ ದೊಡ್ಡ ಮನುಷ್ಯ ಅಂತ ಹೇಳ್ಲೇಬೇಕು. ಆ ಹರಿಜನರನ್ನೆಲ್ಲ ಹೆಂಗೆ ಬಿಡುಗಡೆ ಮಾಡಿದ. ಅಂದರೆ ಅವರಿಗೆ ಹೇಗೆ ಸ್ವಾತಂತ್ರ್ಯ ದೊರಕಿಸಿಕೊಟ್ಟ. ಅಬ್ಬ. ತುಂಬಾ ಕೆಲಸ ಮಾಡಿದ, ಮನುಷ್ಯ..." ಅಷ್ಟು ಹೊತ್ತಿಗೆ ಬಂದ ಅತಿಥೇಯಳನ್ನುದ್ದೇಶಿಸಿ..."ಹೌದು, ಡಾರ್ಲಿಂಗ್...ನನಗೆ ಇನ್ನೊಂದು ಪೆಗ್ ಬೇಕಲ್ಲ, ಏನೂ ಬೆರಸದೆ..." ಎಂದಳು.

ಒಂದು ಕಾಲದಲ್ಲಿ ತೀರಾ ಬುದ್ಧಿವಂತರಾಗಿದ್ದ ಹಾಗೂ ಚಿನ್ನದ ಪದಕಗಳನ್ನು ಪಡೆದಿದ್ದ ಡಾಕ್ಟರೊಬ್ಬರು "ಆತನಿಗೆ ಎಂಥ ವೈಜ್ಞಾನಿಕವಾದ ಮನಸ್ಸಿತ್ತು. ದಂಡಿ ಉಪ್ಪಿನ ಸತ್ಯಾಗ್ರಹವನ್ನೇ ತೆಗೆದುಕೊಳ್ಳಿ. ಎಂಥ symboler ಅದು. ಉಪ್ಪಿಗೂ ರಕ್ತದ ಒತ್ತಡಕ್ಕೂ ಹೇಗೆ ಸಂಬಂಧ ಇದೆ ಎಂಬುದನ್ನು ಎಷ್ಟು ಸಮರ್ಥವಾಗಿ ತೋರಿಸಿದ !"

ಪಕ್ಕದಲ್ಲಿದ್ದ ಮೆದು ಮನುಷ್ಯ ಸಣ್ಣಗೆ ನಡುಗಿದ. ಆದರೆ ಬೇರೆಯೇನೂ ಮಾಡಲಿಲ್ಲ.

ಜಾಹಿರಾತು ಮನುಷ್ಯ ತನ್ನ ನಿಖರವಾದ ಮಾತುಗಳನ್ನು ಆಡತೊಡಗಿದ. "ಅವನ ಹೆಸರು ನೋಡಿ...ಹೆಸರಿಡುವಾಗಲೇ ಎಷ್ಟು ಬುದ್ಧಿ ಉಪಯೋಗಿಸಿದ್ದಾರೆ. ನಮ್ಮ ಕಲ್ಪನೆಗೆ ಮೀರಿದದ್ದು ಅದು. ಎಂ. ಕೆ. ಗಾಂಧಿ—ಮಹಾತ್ಮಾ ಕೆ. ಗಾಂಧಿ !"

ಮೆದು ಮನುಷ್ಯ ಮೆಲ್ಲಗೆ ಬಾಯಿಬಿಟ್ಟ. "ಆತನ ಹೆಸರು ಮಹಾತ್ಮಾ ಕೆ. ಗಾಂಧಿ ಅಲ್ಲ. ಮೋಹನದಾಸ ಕರಮಚಂದ ಗಾಂಧಿ ಅಂತ..." ಆದರೆ ಸುತ್ತಲಿದ್ದವರು ಆತನ ಕಡೆ ಬೀರಿದ ವಕ್ರದೃಷ್ಟಿ ಆತ ತನ್ನ ಬಾಟಲಿನ ಕಡೆ ತಿರುಗುವಂತಾಯಿತು.

ಜಾಹಿರಾತು ಮನುಷ್ಯ ಮುಂದುವರೆಸಿದ ; "ಆಟೆನ್ ಬರೋ ಒಂದು ಒಳ್ಳೆಯ ಕೆಲಸ ಮಾಡಿದ್ದಾನೆ...ಕ್ಯಾಂಡಿಸ್ ಬರ್ಗೆನ್ ಅಂತೂ ಅಬ್ಬ ! ಅಲ್ಲದೆ ಕಿಂಗ್‌ಸ್ಲೆ ಅವನ ಹೆಸರೇನು–ಕಿಂಗ್‌ಸ್ಲೆ ಅಥವಾ ಇನ್ನೊಂದು–ಅದೇ ಗಾಂಧಿ ಪಾತ್ರ ಮಾಡಿರೋನು... ಅವನ ಮುಖದಲ್ಲಿ ಹರಿಜನ ಕಳೆ ಎದ್ದು ಹೊಡೆಯುತ್ತಾ ಇದೆ, ನಾನೇನು ಮಾಡ ಬೇಕೊಂತಿದೀನಿ ಅಂದ್ರೆ..."

ಅವನೇನು ಮಾಡಬೇಕು ಎಂದಿದ್ದ ಎನ್ನುವುದು ಯಾರಿಗೂ ಗೊತ್ತಿಲ್ಲದಿದ್ದರೂ, ಗೊಗ್ಗರ ಗಂಟಲಿನಲ್ಲಿ ಬಂದ ಮಾತುಗಳು..."ಇಲ್ಲಿ ಕೇಳಿ..." ಎಲ್ಲರನ್ನೂ ಸುಮ್ಮನಾಗಿಸಿದುವು.

ಮಾತನಾಡಿದವರು ಮಿ. ಟೋಪೆಯವರು, ಮಾನ್ಯ ಅತಿಥೇಯರು ಮಿಸೆಸ್ ಕಾಮಾಕ್ಷಿಯವರ ಹೆಗಲಿನ ಮೇಲೆ ಕೈಹಾಕಿ ಬಂದವರೇ "ಇಲ್ಲಿ ಕೇಳಿ...ಮುಂದಿನ ತಿಂಗಳು ಹತ್ತನೇ ತಾರೀಖು ನಮ್ಮ ಮಗನಿಗೆ ಹೆಸರಿಡುವ ಸಮಾರಂಭವನ್ನು ಇಟ್ಟು ಕೊಂಡಿದ್ದೇವೆ..." ಎಂದು ಹೇಳಿ, ತನ್ನ ಹೆಂಡತಿಗಾಗಿ ಸುತ್ತ ಮುತ್ತ ನೋಡಿ, ಕಾಣದೆ, ಮುಂದುವರೆಸಿದರು—"ಶ್ರೀಮತಿ ಮತ್ತು ಶ್ರೀ ಟೋಪೆಯವರು ತಮ್ಮೆಲ್ಲರನ್ನು ಆ ಸಮಾರಂಭಕ್ಕೆ ಬರಬೇಕೆಂದು ಕೇಳಿಕೊಳ್ಳುತ್ತೇನೆ..."

ಮೆದು ಮನುಷ್ಯ ಸಾವಧಾನವಾಗಿ ಕೇಳಿದ..."ಏನು ಹೆಸರು ಇಡಬೇಕೆಂದಿದ್ದೀರಿ, ಸರ್..."

ಶ್ರೀ ಟೋಪೆಯವರು ತಮ್ಮ ಟೈ ಸರಿಮಾಡಿಕೊಳ್ಳುತ್ತ, ಆತನನ್ನು ಆ ಪ್ರಶ್ನೆ ಕೇಳಿದ್ದಕ್ಕಾಗಿ ಆಶ್ಚರ್ಯ ಸೂಚಿಸುತ್ತ, "ಹ್ಹ." ಎಂದು ದೀರ್ಘವಾಗಿ ಉಸಿರೆಳೆದು "ಗಾಂಧಿ ಅಂತ, ಅಲ್ಲವೇ ಮತ್ತೆ" ಎಂದರು.

---

(ಮೂಲ ಡಾ. ಎನ್ ನಾಯರ್ ಅವರ ಲೇಖನ–ಇಲಸ್ಟ್ರೇಟೆಡ್ ವೀಕ್ಲಿಯಲ್ಲಿ ಪ್ರಕಟಿತ)

**ಒಂದು ಪ್ರತಿಕ್ರಿಯೆ :**

ನನ್ನ ಪರಿಚಯದವರೊಬ್ಬರು ಕ್ರಾಂತಿಕಾರಿಯಾಗಿದ್ದಾಗ ; ತನ್ನ ಮಕ್ಕಳಿಗೆ; ಮಾವೋ, ಲೆನಿನ್ ಮತ್ತು ಸ್ಟಾಲಿನ್ ಎಂದು ಹೆಸರಿಟ್ಟರು. ಆದರೆ ಈಗ ತಂದೆ ಮಕ್ಕಳಿಬ್ಬರೂ ಆ ಹೆಸರುಗಳ ಬದಲಾವಣೆಯ ಬಗ್ಗೆ ಚಿಂತಿಸುತ್ತಿದ್ದಾರೆ.

(ನನ್ನ ಡೈರಿಯಿಂದ) **ಸಂ :**

## ತಿಂಗಳ ಕಾವ್ಯ

### ಸೃಷ್ಟಿ

ಬಿಸಿಲ ತಾಪಕ್ಕೆ ಸುಟ್ಟ ಭೂಮಿಯ ಮೇಲೆ
ಸಂಜೆ ಮಳೆಹನಿಯ ಹದವಾದ ಸಿಂಚನ
ಮಿಳಿತವಾಗದ ಕೆಂಧೂಳಿನ ಕಣಗಳು
ತುಂತುರು ಹಿತಸ್ಪರ್ಶಕ್ಕೆ ಹೊನ್ನು
ಘಮಿಸುವ ವಾಸನೆ ಹೊತ್ತು
ಹತ್ತು ದಿಕ್ಕಿನಲ್ಲಿ ಹಂಜರಿದು ಅಡಿಯಿಡುವ ಗಾಳಿ
ಚೈತ್ರದ ಕಲ್ಪನೆಗೆ ಚಿಗುರೊಡೆದ
ತಿಳಿಹಸಿರು ಎಲೆಗಳಿಗೆ ಕಿರೀಟ ಕೆಂಪು ಹೂ
ಕೊಂಬೆ ಆಕಾಶಕ್ಕೆ ಚಿಮ್ಮಿ ಪಾತಳದತ್ತ ಬೀಳಲು ಬಿಟ್ಟ
ಅಜ್ಜನ ಕಾಲದ ಛತ್ರಿಯ ಆಲದಲ್ಲಿ
ಹರಿವ ಹುಟ್ಟು ಸಾವಿನ ಜೋಡಿ ಕ್ರಿಯೆ
ಪಾರ್ಕಿನ ಹುಲ್ಲಿನಂಗಳದಲ್ಲಿ ಹಳದಿ ಹೂವಿನ ರಂಗೋಲಿ
ಪಕ್ಷಿಯಂದ ನೀಲಿಯ ಸೆರಗಿಗೆ
ಸುವರ್ಣ ರೇಖೆಯ ಮೆರಗು
ಇರದ ಅತಿಥಿ ಹೆಜ್ಜೆ ಹೆಜ್ಜೆ ಇಡುತ್ತ ಪ್ರತ್ಯಕ್ಷ

ರಹಸ್ಯ ನಿಲುಕದ ಮನಸ್ಸಿನಾಳದ
ನೋವು ಹುರುಪುಗಳ ಚದುರಂಗದಾಟದ ಮಧ್ಯೆ ಮಿಂಚು
ಒಡೆಯಲಾಗದ ಒಗಟೇ ಮನುಷ್ಯ ದೋಣಿಯ ಹುಟ್ಟು.

—ಎ. ಆರ್. ನಾಗಭೂಷಣ

## ಮೂರು ಪದ್ಯಗಳು

ಒಂದು :

ಕೆಂಡ ಸಂಪಿಗೆಯ ವನದಲ್ಲಿ
ಸೂಜಿಮಲ್ಲಿಗೆ ;
ಹೊಂಗೆಯ ನೆರಳಲ್ಲಿ ಮಿಂಡಿನಾಗರ,
ಕೆಳಗೆ ಸೂಜಿ–ಇನ್ನೆಷ್ಟು ದಿವಸ.

ಎರಡು :

ವಿಯಟ್ನಾಮಿನ ಬೀದಿಗಳು ಪಡುವಣ,
ಅಸ್ಸಾಮಿನ ಮೂಡಣದಲ್ಲಿ ಅರುಣ,
ಹೀಗೆಷ್ಟು ದಿಕ್ಕುಗಳು ಹೊಸೆಯುವುದು
ದೇವರ ಸಾಮ್ರಾಜ್ಯದಲ್ಲಿ.

ಮೂರು :

ಬೆಟ್ಟಗಳಲ್ಲಿ ಅಂಗನೆಯರ ಕೊಯ್ದ ಮೊಲೆ,
ನಡುಬೀದಿಯಲ್ಲಿ ಅಣ್ಣಮ್ಮ ಮೈನೆರೆವಳು ;
ಚಿಂದಿ ದಿಕ್ಕುಗಳಲ್ಲಿ ದಾರಿ ಹುಡುಕುವ ಹುಡುಗ
ಗಗನದಲಿ ತೇಲುವುದು ಅವನ ಕನಸಿನ ಚಟ್ಟ.

ನಾಲ್ಕು :

ಅಗ್ನಿಪರ್ವತಗಳು ಭುಗಿಲೆದ್ದ ಚಿಲಿಯಲ್ಲಿ
ಹುಳಬಿದ್ದ ಇತಿಹಾಸ ಪುಟದಲ್ಲಿ
ಹೊನ್ನ ಗಣಿಗಳಲ್ಲಿ.

—ಆನಂದಮೂರ್ತಿ

# ಕಂಬನಿಯು ಹರಕೆ

ಹರಸಿ ಹೇಳುವೆ ಎರಡು ಮಾತನು
ಬೆರಸಿ ನನ್ನ ನೋವನು.
ಅಳಲ ಚೆಲ್ಲಿ ನಗೆಯು ಕೊಂಡು
ನಡೆದ ಬಾಳಿನ ಪ್ರೀತಿಗೆ.

ಯಾವುದೋ ಹೊಸ ತೋಟದಲ್ಲಿ
ಬೆರೆತು ಹೋದ ಒಲವಿಗೆ
ಜಾಜಿ ಮಲ್ಲಿಗೆ ಕೂಟದಲ್ಲಿ
ಮರೆತು ಹೋದ ಮಾತಿಗೆ

ಯಾರದೋ ಮುಡಿ ಮಿಲನಕೆಂದು
ಅರಳಿ ನಿಂತ ಹೂವಿಗೆ
ಮೇಲು ಮೇಲಕೆ ಹಾರುತಿರುವ
ಪಾರಿವಾಳದ ಗೆಲುವಿಗೆ.

ಕಡಲ ಸೇರುವ ತವಕದಲ್ಲಿ
ಓಡುತಿರುವ ಹೊನಲಿಗೆ
ದೂರದಿಕ್ಕಿಗೆ ಸಾಗುತಿರುವ
ಬೆಳ್ಳಿ ಮುಗಿಲಿನ ಚೆಲುವಿಗೆ

ನನ್ನ ಮನದಲಿ ಕುಣಿಯುತ್ತಿದ್ದ
ನವಿಲು ಅನ್ಯರ ವನದಲಿ.
ನವಿಲಿಗೇನ ನೀಡಬಲ್ಲೆ
ಕಂಬನಿಯು ಕಿರುಕಾಣಿಕೆ

—ಸಿದ್ಧಲಿಂಗಯ್ಯ

# ಇಳಿಯಿರೇ

ಗುಲಾಬಿ ನಂದನದಲ್ಲಿ ಕರೆವ ಮನದನ್ನೆಯರೆ
ಬಸಿರ ಹೂ ಬಲಿಗೊಟ್ಟು ಪೊರೆದ ಮಹ ಪನ್ನೆಯಂಕೆ
ಎಲ್ಲಿರುವಿರೇ ಈಗ ಎಲ್ಲಿರುವಿರಿ ?

ಸೂರ್ಯನುದಿಸಿದ ನಾಡ ನಲ್ಲವಾಟಿಕೆಯಲ್ಲಿ
ಅಪರಂಜಿ ಗಿಡಕೆ ಅಪರಂಜಿ ಹಿನ್ನೆಲೆಯಾದ
ದೇವಗನ್ನೆಯರೆ
ಎಲ್ಲಿರುವಿರೇ ನೀವು ಎಲ್ಲಿರುವಿರಿ ?

ಸಿಂಹ ನಡುವ ತೂಗಿ
ಅಸಂಖ್ಯ ಅದ್ಭುತವಾಗಿ
ಕಣ್ಮಾತು, ತುಟಿಯೋದು,
ನಗೆಯಲ್ಲಿಯೇ ನೀವು ಬರೆದ ಬರಹ
ಎಲ್ಲಿರುವಿರೇ ನುಡಿಗೆ ತುಂಬ ತೊಡಕು.

ಮೊಗದ ಪ್ರಭೆ
ಉಸಿರಿನ ಹಾಸ
ಬಳ್ಳಿ ಮೂಡದ ಹಳ್ಳಿಯಲ್ಲಿ ಬೆಳಕನು ಚೆಲ್ಲಿ
ಎತ್ತಿಕೊಂಡವರೇ
ಎಲ್ಲಿರುವಿರೇ ನೀವು ಎಲ್ಲಿರುವಿರಿ ?

ಮೈಯಾದ ಮೈ ಭಾವಭರಿತ
ಕಣ್ಣಾದ ಕಣ್ಣೆಲ್ಲ ದೃಶ್ಯಭರಿತ
ಸಮೃದ್ಧ ಕೇಸರಾಶಿಯು ಬೆಡಗು
ಅರಳು ಮಲ್ಲಿಗೆ ಚೆಲುವಿಗರಳಿ ನೆಲವು
ನಕ್ಕು ನುಡಿಸಿದ ನಿಮ್ಮ ಒಲುಮೆ ಫಲವು
ಹೆಣ್ಣು ಕತ್ತಲೆಯಷ್ಟೆ ಬೆಳಕಿನನುಭವ ಕೂಡ
ಎಂಬ ನೆಲೆಗಾಣಿಸಿದ ನೀವು ಈಗ
ಉಂಡಂಥ ನೋವಿಗೂ ಬರಲಿರುವ ಸಾವಿಗೂ
ಅಮೃತ ಲೇಪನ ಮಾಡಲಿಳಿಯಿರೇ ಬೇಗ.

—ವೀಚಿ

# ಒಬ್ಬ ಆರಂಭಸ್ತನ ಭೂಮಿ ಗೀತೆ

ಗೊಬ್ಬಳಿ ತಂಡಿಗೆ ಚೆನ್ನಾಗಿ ಪಟ್ಟು ಕೆತ್ತಿ, ವೆಜ್ಜ ತೋಡಿ
ನಿಡಿದಾದ ಈಚು ಕೂರಿಸಿ, ಕಡದು-ಬಳದಿನ ಹೂಟಾ ನೋಡಿ
ಮೆಟ್ಟಿದ ಜಿಗಣೆಗೆ ಚೂಪು ಗುಳ ಸಿಗಿಸಿ
ಬಂದು ಬಸ್ತಿನ ಸಂದಿಗೆ ಚಕ್ಕೆ ಬೆಣೆ ಜಡಿದು...
ನೇಗಿಲಿಕ್ಕಿ—

ಅಲ್ಲೇ ಒಂದು ಪುಟ್ಟ 'ಮೇಣಿ ಹಾಲ್ಕುಡಿಸಿ' ಕಳಿಸಿದ ಬಡಗಿ
ಜಡೆಲಿಂಗಾಚಾರಿಯ ಕಸುಬಿನನುಭವ-ಕೈಚಳಕಕ್ಕೆ ತಲೆದೂಗಿ
ಅದನ್ನೇ ನೆನೆಯುತ್ತ ಹೊರಟ ಗರುಡಾಳ...

ಅಪ್ಪ ಹೊಸದಾಗಿ ಖರೀದಿಸಿದ ದಡದಳ್ಳಿಯ
ಗಿಡಬಾರೆ ಕಿಳ್ಳಿನ ಕದಿರಮ್ಮನ ಕೆರೆ ಹಡಲಿಗೆ
ಸರಬರ ಬಂದ : ಸೀಳುಕ್ಕೆ ಹೊಡೆಯಲು

* * *

ದೇಶ ಕಾಣದ ಮೀಸೆ ಕುಮಾರನಿಗೆ ಅದೇ ಮೊದಲು–
ಕಾಡುಮೇಡಿನ ಮೋಡಿ ಸೀಮೆಯ ಅತಿ ನಿಕಟ ಪರಿಚಯ
ಹಾಗಾಗಿ, ನಿಂತ ನೆಲೆಯಲ್ಲೆ ಆರಗಳಿಗೆ ಮೂಕ ವಿಸ್ಮಯ !—

ಹಡಲಿನ ಒಡಲಾದೊಡಲೆಲ್ಲ ಕಳೆ ಹಳುವಿನ ಮಯ !
ಹೊನ್ನು ಬಿತ್ತಿ ಚಿನ್ನ ಬೆಳೆಯುವ ನೆಲ ಎಲ್ಲೋ
ಮಂಗ ಮಾಯ !....
ಹರು ಬದುವಿನ ಕಾರೆ ಗುತ್ತಿಯ ನಡುವೆ
ನೆತ್ತಿ ಮುಟ್ಟಿದ ಹುತ್ತ ! ಅಬ್ಬ, ಎಷ್ಟೊಂದು ಕೋವೆ ?!
(ಹೊತ್ತರೆಯ ಕೋರೆಯಲ್ಲೂ ಒಳಗದೆಂಥ ಬೆಚ್ಚನೆ ಹವೆ !
ನಿನ್ನ ದಮ್ಮಯ್ಯ, ಕೈಮುಗಿವೆ, ಇತ್ತ ಚಿತ್ತೈಸದಿರು ಹಾವೇ !)

ಮುಖ ನೋಡುತ್ತ ನಿಂತರೆ ಸುಖವಿಲ್ಲವೆಂದರಿತ ಮದಲಿಂಗ
ಸೊಕ್ಕಿದ ಕಾಡಿಗೆ ಆಡು ಬಿಟ್ಟೇಬಿಡುವ ಮನಸ್ಸು ಮಾಡಿ
ಮೆತ್ತಗೆ ಮಟ್ಟಿಗಿಳಿದ—

ಎತ್ತಿನ ಹೆಗಲೇರಿದ ನೊಗದ ತುಡಕ್ಕೆ ಈಚಂ ಸೇರಿಸಿ
ಮೇಣಿ ಬುಡಕ್ಕೆ ಕುಣಿಕೆ ಜೇರಿ, ಮಿಣಿ ಬಿಗಿದು
ನೇಗಿಲು ಹೂಡಿದ...

ನಿಜಕ್ಕು ಅಪ್ಪ ಕೊಂಡಿರುವುದು
ಅಪ್ಪಾಗಿ ಗೋಡುಗೊಬ್ಬರ ಬೇಡದ
ಆದರೆ, ಹದಬೆದೆಯಲ್ಲಿ ಸರಿಯಾಗಿ ನೇಗಿಲಾಡದ
ಒಳ್ಳೆ ಐನಾತಿ ಜಮೀನಂ ; ಅನುಮಾನವಿಲ್ಲ.
ಜತೆಗೆ, ತೀರ ಹತ್ತಿರದಲ್ಲೆ
ಸದಾ ಜುಳುಜುಳಿಸುವ ಕೆಂಬಾರೆ ಹಳ್ಳ !
ತಂಸ ಕೆಳಗೆ ಅದು ಕೂಡಂವ
ಕೆಂದಾವರೆ ಕೆರೆ ತಾರಾ ಮಂಡಳ !
(ಈವರೆಗ್ಯಾರ ಬಾಯಲ್ಲು ಕಂಡಂ ಕೇಳಿಲ್ಲ
ಯಾವುದೇ ಎಟ್ಟೆ–ಬರ ಆ ಆಗಾಂತರಕ್ಕೆಲ್ಲ)

*　　*　　*

ಬೀಟು ಸೆಳೆಯಂದರೆ ಭೂಮಿಂಗೆ
ಸಲೀಸು ನಾಟಿದ ಗುಳ
ಮಾರಾಳ ಹುಳಂವ ಪುರಪುರ ಸೀಳಿ ಸಾಗಿತು
ನಿರಾಳ....

ಇದ್ದಕ್ಕಿದ್ದಂತೆ ನೀರ್ಹಕ್ಕೆ ಮುಗ್ಗುಲಲಿ
ಗಕ್ಕನೆ ನಿಂತು ಹೋಯಿಂತಂ ಆರಂ–ತದಿಗೆ ಹಬ್ಬದ ತೇರು !

ಕಕ್ಕಾಬಿಕ್ಕಿ ಹೈದ
ಅಡೊಟ್ಟೆಯಂ ತೆವಡೆ ತಿವಿದಂ
ಮೇಣಿ ತಲೆಹಿಡಿ ಹಿಡಿದು
ಚಿಟಿಮುಳ್ಳಾಡಿಸಿದ––

ತೇವದೊಡಲಾಳದಲ್ಲಿ
ತಳಕಚ್ಚಿ ಏಳಲಾರದ ಗುಳ
ಗಳಗಳ ಅತ್ತಂ, 'ಕೀಳಿತಂ ಮತ್ತಷ್ಟು ನೀರ' :

ಬದುವಿನಾಲದ ಬೊಡ್ಡೆ ಅಡ್ಡ ಚಾಚಿದ ಬೇರ
ಭಡ್ಡೆನಿಸಿ ಮುನ್ನಡೆಯಲು

ಹಗ್ಗ ಜಗ್ಗಿ
ಗಂಳ ಹಿರಿದೆತ್ತಿ
ಸಾಗಲೊಪ್ಪದ, ಉಡಹಿಡಿದ ಬೇರನಲ್ಲೇ ಕಡಿದು ಚೆಲ್ಲುವ
ಛಲ ಬಿಡದ ಎಳೆ ರೈತ–
ಚಾಟಿ ಛಟೀರಿಸಿ
ಮೇಣಿಗೆದೆಕೊಟ್ಟು
ಎತ್ತ ಅದ್ದಲಿಸಿದ....

ಚಾಟಿ ಕುಡಿಬಿಸಿಯು ಉರಿ ತಡೆಯಲಾರದ ಹೋರಿ
ತುಯ್ದೇ ತಂಯ್ದ್ದವು ದೆಗ್ಗಲಂ ಮಂಡಿಯೂರಿ....
ಕಡುಪಿನುಳೋ ಹಗ್ಗದ
ನರನರವು ಜಿರಜಿರ ಜೀಕಿ
ಕ್ಷಣದಲ್ಲೆ ಭಡಾರೆಂದಿತಂ ಈಚು
ಬಾಗಿ ಬಳುಕಿ !

ತಲೆದಸಿಯಂಲ್ಲೆ ಸಿಡಿದಂತಾಗಿ
ಜೋರು ನಳಿಗೆಯು ಕೋವಿ
ದಿಕ್ಕಾಪಾಲಂ ಚೆಲ್ಲಿ ಚೆದುರಿದವು
ಹಳ್ಳದೊತ್ತಿಯಂ ಹಿಪ್ಪೆ ತೋಪಿನ ಹಕ್ಕಿ !

ಕುತ್ತಿಗೆ ಜೊತ್ತಿಗೆ ಕಿತ್ತು
ಬೋರೆ ಕಡೆ ಪೇರಿ ಕಿತ್ತಿತಂ
ಬಲಗೋಲೆತ್ತು !

ಉಕ್ಕಿ ತೆರೆ ತೆಕ್ಕೆ ಬಿಕ್ಕಿದ ಹೊಸ ಪೂಜಾರಿ—
ಈಚು ಸವರಿದಾಚಾರಿಯ ಕುಲಗೋತ್ರವ
ವಾಚಾಮಗೋಚರ ಜಾಲಾಡಿ



ಕೂದ್ರ

ಮಂಜಿಗಂ ಮಂಪುಡಿಯು ಮಣ್ಣೊರೆಸಿಕೊಂಡೆದ್ದು ಮತ್ತಲ್ಲೇ
ಕುಸಿದ
ಸೊಂಟ ಹಿಡಿದಂ !

*    *    *

ಮೂರನೇ ದಿನ ಬಾಳೊತ್ತಿಗೇ ಎದ್ದ
ಸಂಬಳದಾಳಂ ಗೂಳಿ ಕರಿಯು–
ಅದೇ ಜಾಗಕ್ಕೆ ಆರು ಕಟ್ಟಿ
ತಂಗಳ್ಹೊತ್ತಿಗೇ ದಡ ಹತ್ತಿದ !

—ಬಿ. ರಾಜಣ್ಣ

## ಒಬ್ಬನಿದ್ದನು ಮುದುಕ

ಒಬ್ಬನಿದ್ದನು ಮುದುಕನವನು ಬಲು ಚೋಟಿ
ತನ್ನ ಸಿರಮೇಲವನಿಗೆಂಥಾ ಹತೋಟಿ !
ಒಗೆದೊಣಗಹಾಕಿರುವ
ಒದ್ದೊದ್ದೆಯಾಗಿರುವ
'ಬ್ರಾ'ವುಬ್ಬುವಂತೂದುವಂಥಾ ಹತೋಟಿ !

*    *    *

ಒಬ್ಬನಿದ್ದನು ಮುದುಕನವನು ಬಲು ಘಾಟಿ
ಹುಡುಗಿಯನು ನೋಡಿದರೆ ಹಾಕುವನು ಸೀಟಿ
ಮುಖವ ಸಿಂಡರಿಸಿದರೆ
ಹುಡುಗಿ, ಬೀರುವನು : ಅರೆ !
ಎಷ್ಟುದ್ದ ನನ್ನ ಸೀಟಿಯ ಶಬ್ದದೀಟಿ !

*    *    *

ಒಬ್ಬನಿದ್ದನು ಮುದುಕ ಪಕ್ಕಾ ಕಿಲಾಡಿ
"ತಾತ ! ನಿನಗೇನಿಷ್ಟ ?" ಎಂದವರ ನೋಡಿ
"ತಾತ ? ಆಮೇಲೇನು ?
ತೀತಿ ! ಆಮೇಲೇನು ?
ಹೇಳಿ !" ಎನ್ನುತ್ತ ಕಣ್ಣ ಹೊಡೆಯುವನು ಕೇಡಿ

* * *

ಮುದಿ ಮರುಳನೊಬ್ಬನ ಖಯಾಲಿಯೆ ಖಯಾಲಿ
ಚೆಲುವೆಯರ ಚಿತ್ರಗಳ ಹಿಂಬದಿಯ ಖಾಲಿ-
ಜಾಗವನು ಸವರುತ್ತ
"ಇಲ್ಲಿ ಹುಡುಗಿಯ ಸುತ್ತ
ಬಟ್ಟೆಯಿಲ್ಲದೆ ಮೇಲು !" ಎನ್ನುವನು ಪೋಲಿ

* * *

ಒಬ್ಬನಿದ್ದನು ಮುದುಕನವನು ಬಲು ತರಲೆ
ಮನಸಿನಲಪಾಪೋಲಿ ದೇಹದಲಿ ಹಸುಳೆ
ಅಂಬೆಗಾಲನ್ನಿಡುತ
ಬೊಚ್ಚು ಬಾಯ್ಬಾಯ್ಬಿಡುತ
"ಬೇಕು ಮೊಲೆ" ಎಂದವನ ರಗಳೆಯೋ ರಗಳೆ !

—ಬಿಳಿಗಿರಿ

ಓದು :

ಋಜುವಾತು
ಅಂಕಣ
ಸಂಕ್ರಮಣ
ಪಂಚಮ

# ಪುಸ್ತಕ ವಿಮರ್ಶೆ

## ಕಪ್ಪು ಕಾಡಿನ ಹಾಡು

ಬಂಡಾಯದ ಕವಿ ಶ್ರೀ ಸಿದ್ಧಲಿಂಗಯ್ಯನವರ ಕಾವ್ಯದ ಬೆಳವಣಿಗೆಯು 'ಕಪ್ಪು ಕಾಡಿನ ಹಾಡು' ವಿನಲ್ಲಿ ವ್ಯಕ್ತವಾಗಿರುವುದಕ್ಕೆ ಹಲವಾರು ಕಾರಣಗಳಿವೆ. ಮುಖ್ಯ ಕಾರಣ ; ಮೊದಲ ಎರಡು ಕವನ ಸಂಕಲನದಲ್ಲಿ ವಾಚ್ಯವಾಗಿದ್ದ ಇವರ ಧ್ವನಿ ಸೂಚ್ಯವಾಗಿ, ವಾಸ್ತವದ ಸಂಕೀರ್ಣತೆ, ರೋಷದ ಆಳದ ನೋವು, ಹತಾಸೆ, ನಿರಾಸೆ, ಆಸೆಗಳು ಸಾಂಕೇತಿಕವಾಗಿ, ದಟ್ಟ ಅನುಭವಗಳಾಗಿ, ನಾನಾ ಆಯಾಮಗಳಲ್ಲಿ ಗಾಢತೆ ಹೊಂದುತ್ತಾ, ಮನಸ್ಸಿನ ಮೇಲುಸ್ತರದಿಂದ, ಅಂತರಂಗದ ಮೂಲ ಸೆಲೆಯನ್ನು ಕೆದಕುವ ಸಾಮರ್ಥ್ಯವನ್ನು ಇಲ್ಲಿಯ ಕೆಲವು ಕವನಗಳು ದುಡಿಸಿಕೊಂಡಿರುವುದು. ಜೊತೆಗೆ ಇವರ ನೋವು, ಆಕ್ರೋಶಗಳು ಬೇರೆಯಾದ ಸ್ತರದಲ್ಲಿ ಕೆಲಸ ಮಾಡಿ, ಭಾಷೆ, ತಂತ್ರ, ವಸ್ತುಗಳು ಭಿನ್ನ ರೀತಿಯ ಅಭಿವ್ಯಕ್ತಿಯನ್ನು ಪಡೆದಿರುವುದು.

ಇಲ್ಲಿಯ 'ನನ್ನ ಕವನ'ವನ್ನು 'ಹೊಲೆ ಮಾದಿಗರ ಹಾಡು'ವಿನ 'ಮಸಣದ ಚೆಲುವೆಗೆ' ಕವನದೊಂದೆಗೆ ಹೋಲಿಸಿ ನೋಡಿದಾಗ ಸಿದ್ಧಲಿಂಗಯ್ಯನವರ ಭಾಷೆ, ತಂತ್ರ, ಅಭಿವ್ಯಕ್ತಿ, ಸಂಕೇತಗಳಲ್ಲಿ ಸ್ಪಷ್ಟ ವ್ಯತ್ಯಾಸಗಳು ಕಂಡುಬರುತ್ತವೆ.

ಗುಡಿಸಲಲ್ಲಿ ಅರಳುವ ಗುಲಾಬಿ
ನಕ್ಷತ್ರ ನನ್ನ ಕವನ,
ಬದುಕ ಪ್ರೀತಿಸುವ ಬಡವರ ಮಗಳು
ನಿರಾಭರಣೆ ಕವನ,
ಹೆಣ್ಣು ತುಳುಕಿಸಿದ ಕಣ್ಣೀರಿನ ಹನಿ
ನನ್ನ ಪುಟ್ಟ ಕವನ.

---

'ಕಪ್ಪು ಕಾಡಿನ ಹಾಡು'—ಸಿದ್ಧಲಿಂಗಯ್ಯ, ರೂಪಧ್ವನಿ ಪ್ರಕಾಶನ, ನಂ 16/1, 7ನೇ ಕ್ರಾಸ್, ಕುಮಾರ ಪಾರ್ಕ್ ಪಶ್ಚಿಮ, ಬೆಂಗಳೂರು–560 020, ಬೆಲೆ : ಆರು ರೂಪಾಯಿ

ಇಲ್ಲಿನ ಭಾಷೆಯಲ್ಲಿ ಆಕ್ರೋಶವಿಲ್ಲ. ದ್ವೇಷದ ಆಳದಲ್ಲಿ ಹುಟ್ಟುವ ಬರಿಯ ಜೀವಂತ ವಿರೋಧಿ ದೋರಣೆಯ ಸಂಕೇತಗಳಿಲ್ಲ. ದಲಿತರ ಪ್ರತಿನಿತ್ಯ ಜೀವನದಲ್ಲಿ ಕಾಣಿಸಿ ಕೊಳ್ಳುವ ಚೈತನ್ಯದ ಸಂಕೇತಗಳಲ್ಲಿಯೂ ಇವರು ಬಯಸುವ ಆಶಯ ಪಕ್ವತೆ ಪಡೆದಿದೆ. 'ಮಸಣದ ಚಲುವೆ'ಯಲ್ಲಿ ಇವರು ಹೇಳುತ್ತಾರೆ :

ಹೆಣದೊಡವೆಯ ಹೆಣಗಬಯಸುವ
ಸತ್ತಿರುವರ ಸೀರೆ,
ನೀನೆಯೆ ಸರಿ ನೀನೆಯೆ ಸಿರಿ
ನೀ ನನ್ನಯ ಹೆಣ್ಣು
ನಿನ್ನನು ನಾ ಮೆಚ್ಚಿರುವೆನು
ನೀ ಕಾವ್ಯದ ಕಣ್ಣು.

ಎರಡು ಪದ್ಯದ ಕವನದ ವಸ್ತು—ಕವನದ ವಸ್ತುವನ್ನು ಕುರಿತಾದದ್ದು. ಮೇಲಿನ ಸಾಲುಗಳ ಭಾಷೆಯ ಪಕ್ವತೆಯಾಗಲೀ, ಧ್ವನಿಯಾಗಲೀ ಈ ಸಾಲುಗಳಲ್ಲಿ ಕಾಣುವು ದಿಲ್ಲ. ವಾಚ್ಯವಾಗಿರುವುದರ ಜೊತೆಗೆ ದೇಶಭಕ್ತಿಗೀತೆಯ ತರಹೆಯ ಹುರುಪು ಇಲ್ಲಿ ಕಾಣಿಸುವುದರಿಂದ, ಮನಸ್ಸಿನ ಮೇಲ್ಪದರದಲ್ಲಿ ಕೆಲಸಮಾಡುವ ಈ ಸಾಲುಗಳು ಕಾವ್ಯಾತ್ಮಕ ಸ್ಪಂದನೆಗೆ ಸಿಕ್ಕುವುದಿಲ್ಲ. ಸಂಯಮದಲ್ಲಿ, ಭಿನ್ನ ರೀತಿಯ ಅಭಿವ್ಯಕ್ತಿಯಲ್ಲಿ, ಭಾಷೆಯ ಪಕ್ವತೆಯಲ್ಲಿ ಮೂಡಿ ಬಂದ 'ಗುಡಿಸಲಲ್ಲಿ ಅರಳಿದ ಗುಲಾಬಿ ನಕ್ಷತ್ರ' 'ಬಡವರ ಮಗಳು ನಿರಾಭರಣೆ' 'ಹೆಣ್ಣು ತುಳುಕಿಸಿಹ ಕಣ್ಣೀರು'ಗಳು ಧ್ವನಿ ಹೊಂದಿದ್ದು ಕವನದ ಆಶಯದ ಬಗ್ಗೆ ಓದುಗರಲ್ಲಿ ಪ್ರೀತಿ ಹುಟ್ಟಿಸುತ್ತವೆ. 'ಮಸಣದ ಚಲುವೆ' 'ಹೆಣದೊಡವೆ', 'ಗೋರಿ,' ಮುಂತಾದ ಕ್ರೌರ್ಯ ಬಿಂಬಿಸುವ ಸಂಕೇತಗಳಲ್ಲಿಯೇ ತ್ವರಿತ ಗತಿಯಲ್ಲಿ ಸಾಗುವ 'ಮಸಣದ ಚಲುವೆ'ಗಿಂತ 'ರಕ್ತದ ಕೋಡಿ' 'ಕೆಂಪು ಕಡಲು' 'ಅರಮನೆ ಸಾವು'ಗಳ ಸಂಕೇತಗಳೊಂದಿಗೆ 'ಗುಲಾಬಿ ನಕ್ಷತ್ರ', 'ಬಡವರ ಮಗಳು ನಿರಾಭರಣೆ' ಕುರುಬನ ಕೂಗುಗಳಂತಹ ಸಂಕೇತಗಳ ಜೊತೆಗೆ ಸಾಗುವ 'ನನ್ನ ಕವನ' ಕಾವ್ಯಾತ್ಮಕ ಸಂವೇದನೆ ಪಡೆಯುವುದರ ಜೊತೆಗೆ, ನೋವು, ಆಶಯಗಳನ್ನು ಅಂತ ರಾಳದಲ್ಲಿ ಪಕ್ವಗೊಳಿಸುವ ಸಾಮರ್ಥ್ಯವನ್ನು ಹೊಂದಿದೆ. ನೋವಿನ ಧ್ವನಿ 'ಮಸಣದ ಚಲುವೆ'ಯಲ್ಲಿ ಏಕತಾನವಾಗಿದ್ದರೆ, ಇಲ್ಲಿ 'ಗುಡಸಲು,' 'ಬಡವರ ಮಗಳು', 'ಕಂಗೆಟ್ಟ ಜನ', 'ಕುರುಬರು', ಹೀಗೆ ಹತ್ತಾರು ಜನರು ಇವರ ಜನರಾಗುವಲ್ಲಿ, ಧ್ವನಿ ಗಾಢತೆಯ ಒತ್ತು ಪಡೆಯುತ್ತದೆ. ಅಭಿವ್ಯಕ್ತಿ ವಿಧಾನದ ತಂತ್ರ ಕೂಡಾ ಇಲ್ಲಿ ಪಕ್ವತೆ ಪಡೆದಿರು ವುದನ್ನು ಕಾಣಬಹುದು.

'ಸುಟ್ಟಾವು ಬೆಳ್ಳಿ ಕಿರಣ' 'ನಿನ್ನ ಕಣ್ಣಿನ ಮಾತು' 'ಗೌಳಗಿತ್ತಿಯ ಹಾಡು' 'ನೆನಪು' 'ಎಚ್ಚರ' ಇವು ಇವರ ಕಾವ್ಯ ಪ್ರಪಂಚದಲ್ಲಿಯೇ ಅಚ್ಚರಿ ಹುಟ್ಟಿಸುವಂತಹ ಕವನಗಳು. ಕವನದ ವಸ್ತುಗಳ ವೈವಿಧ್ಯತೆ ಈ ಅಚ್ಚರಿಗೆ ಮೂಲ. ಜೊತೆಗೆ ಅಭಿವ್ಯಕ್ತಿ ಸಾಮಾಜಿಕ ಸ್ತರದಲ್ಲಿ ಪ್ರೀತಿಯನ್ನು, ಪ್ರೀತಿಯ ಸಂಕೀರ್ಣತೆಯನ್ನು ಹಿಡಿಯುವ ಇವರ ತುಡಿತಗಳು ಸೂಕ್ಷ್ಮವಾಗಿವೆ, 'ಮಸಣದ ಚಲುವೆ' 'ನನ್ನವಳಿಗೆ' ಎಂಬ ಹಿಂದಿನ ಸಂಕಲನದ ಕವನಗಳಲ್ಲಿ ಹೆಣ್ಣನ್ನು ಸಾಂಕೇತಿಕವಾಗಿ ಕ್ರಾಂತಿಗೆ, ಕವನಕ್ಕೆ ಹೋಲಿಸಿರುವ, ಪ್ರೀತಿಸಿರುವ ಸಿದ್ಧಲಿಂಗಯ್ಯನವರು, ಇಲ್ಲಿ ವಾಸ್ತವಿಕವಾಗಿ ಹೆಣ್ಣನ್ನು ಪ್ರೀತಿಸಿರುವ, ನೋವನ್ನುಂಡಿರುವ ಅನುಭವದ ಚಿತ್ರಣವನ್ನು ಕೊಡುತ್ತಾರೆ. 'ಹೊಲೆ ಮಾದಿಗರ ಹಾಡು' ವಿನ 'ಕನ್ನಡವ್ವನಿಗೆ' ಎಂಬ ಕವನದಲ್ಲಿ ಸಾಂಕೇತಿಕವಾಗಿರುವ 'ಮಾಲೀಕರ ಮಿಂಡಗಾತಿ' ಭಾರತಾಂಬೆಯು ಚಿತ್ರಣ, 'ನನ್ನವಳಿಗೆ' ಕವನದ 'ಕ್ರಾಂತಿ' ಕನ್ನೆಯನ್ನು ಅಪ್ಪುವ ಕನಸು ; ಭವಿಷದ್ಗೀತೆಯ 'ಕಪ್ಪು ವಸ್ತ್ರದ ಭೂದೇವಿ,' 'ಮಸಣದ ಚಲುವೆಯ' ಕಾವ್ಯದ ಹೆಣ್ಣು, 'ಕರಾಳ ರಾಣಿ'ಯಲ್ಲಿ ಮೂಡಿಬಂದ ಹೆಣ್ಣಿನ ಕರಾಳ ಶಕ್ತಿ, 'ಕೆಂಪು ಸೂರ್ಯ'ದ ಕ್ರಾಂತಿ ಕನ್ಯೆ, 'ಕಂಡೆ ನನ್ನವಳ ಒಂದು ದಿವಸ'ದಲ್ಲಿ ದುಸ್ಥಿತಿಗೆ ಇಳಿದ ಹೆಣ್ಣು 'ಭಾರತಾಂಬೆ,' ಹೀಗೆ ಸಿದ್ಧಲಿಂಗಯ್ಯನವರು ಸಾಂಕೇತಿಕ ಅರ್ಥದಲ್ಲಿ ಮಾತ್ರ ಹೆಣ್ಣನ್ನು ಬಳಸಿಕೊಂಡಿದ್ದಾರೆ. ವಾಸ್ತವಿಕ ಹೆಣ್ಣು ಕವನದ ವಸ್ತುವಾಗಿರುವುದು, 'ಗೆಳತಿ' ಎಂಬ ಸಂಭೋದನೆಯಲ್ಲಿ ಅಭಿವ್ಯಕ್ತಿ ಪಡೆದಿರುವುದು ಮೇಲ್ಕಂಡ 'ಕಪ್ಪುಕಾಡಿನ ಹಾಡು'ವಿನ ವೈಶಿಷ್ಟ್ಯಗಳು.

ಕ್ರಾಂತಿ ಕನ್ಯೆ ಮೋಹ ಜನ್ಯೆ
ನಿನ್ನೆ ಮದುವೆಯಾಗುವೆ
ಕ್ರಾಂತಿ ಕಿಡಿಯು ಸಿಡಿಸುವಾಗ
ನಾನು ನಿನ್ನ ತಬ್ಬುವೆ.

['ನನ್ನವಳಿಗೆ', 'ಹೊಲೆ ಮಾದಿಗರ ಹಾಡು']

ಎನ್ನುವ ಇವರ ಪ್ರೀತಿಯ ಧ್ವನಿ - ಸಾಮಾಜಿಕ ಸ್ತರಗಳಲ್ಲಿ ಸಾರ್ಥಕ ಪಡೆಯದ ತಮ್ಮ ಪ್ರೀತಿಯ ನೋವಿನ ಬಗ್ಗೆ ತಿರುಗಿ ಹೀಗೆ ಧ್ವನಿಸುತ್ತದೆ.

ತೆಂಗು-ತಾರೆಗಳ ಸಂಗಮವು ಮುಗಿದು
ಮಸಸಿತ್ತು ಮುಗಿಲಿನಲ್ಲಿ

[ಸುಟ್ಟಾವು ಬೆಳ್ಳಿ ಕಿರಣ]

ತುಂಬಿ ತೆಂಗುಗಳ ಅಂತರವು
ಗುಡಿಯ ಗೋಪುರದೊಡನೆ
ಜೋಪಡಿಯ ಗರಿಗಳಿಗೆ
ನಂಟಾಗಲಿಲ್ಲ.

[ನಿನ್ನ ಕಣ್ಣಿನ ಮಾತು]

ಸುಟ್ಟ ಹೆಣಗಳ ಸಾಲು ಮೆರವಣಿಗೆ
ಬಂದಾಗ ಪುಟ್ಟ ಕಂದಮ್ಮಗಳ
ಚೀರಾಟಗಳ ನಡುವೆ
ನಿನ್ನ ಕಣ್ಣಿನ ಮಾತು ತಿಳಿಯಲಿಲ್ಲ.

[ನಿನ್ನ ಕಣ್ಣಿನ ಮಾತು]

ಎಲ್ಲೆಲ್ಲು ತುಂಬಿದ ನೋವಿನ ಒಳಗೇ
ಗುಲಾಬಿ ವನಗಳೇ ಸುಳಿಯದಿರಿ.

ಈ ಕವನಗಳ ಸಾಫಲ್ಯತೆ ಇರುವುದು—ನೋವಿನ ತೀವ್ರತೆ ಭಾಷೆಯಲ್ಲಿ ಪಕ್ಕಾಗಿ, ಸಂಯಮದಲ್ಲಿ ಸಾಂಕೇತಿಕತೆಯಾಗಿ ಧ್ವನಿಸಿ, ಅಂತರಾಳದ ತುಡಿತ ಬಡಿದೆಬ್ಬಿಸುವಲ್ಲಿ.

ರೋಷದ ಕಾವು, ಅಸಾಧ್ಯ ಶಕ್ತಿ, ಕ್ಷಣದಲ್ಲಿ ಫಲಿಸುವ ಆಸೆಗಳ ಲೋಕ ಈ ಕವನ ಸಂಕಲನದಲ್ಲಿ ಮೊದಲು ಹೇಳಿದಂತೆ ನೋವಿನ ಅನುಭವದ ವಿವರ, ತೀವ್ರತೆಗಳಿಗೆ ದಾರಿಮಾಡಿದೆಯಲ್ಲದೇ, ಇಲ್ಲಿ ಆಸೆ ನಿರಾಸೆಗಳ ಸಂಗಮವಿದೆ. ಬರಿಯ ಆಕ್ರೋಶದ, ಹುರುವಿನ ಲೋಕ ಇಲ್ಲಿ ಇಲ್ಲ.

'ತೊಟ್ಟಿಕ್ಕಿದ ಬೆವರ ಹನಿ ಬೆಂಕಿಯಾಗಿ ಸಿಡಿದು'
'ಸುಲಿದವರನು ಸುಲಿವದಿನ ಬಂದಿತೆಂದು ಹಿಗ್ಗುತಿದೆ.
ಸುಡುಗಾಡಿನ ಬಿರುಗಾಳಿಯ ಕ್ರಾಂತಿಗೀತೆ ಹಾಡಿ'

[ 'ಕ್ರಾಂತಿಗೀತೆ' ]
'ಹೊಲೆಮಾದಿಗರ ಹಾಡು'

ಎನ್ನುವ ಸಾಲುಗಳ ಜೊತೆಗೆ

ಕೂಗಿ ಕುಣಿಯುತ್ತಿದ್ದ
ಕುಡುಗೋಲು ಸುತ್ತಿಗೆಯಾ
ಉಳ್ಳವರ ಕುತ್ತಿಗೆಯ ಕತ್ತರಿಸಲಿಲ್ಲ.

[ 'ನಿನ್ನ ಕಣ್ಣಿನ ಮಾತು' ]

ಎಂಬ ಸಾಲುಗಳಲ್ಲಿ ಬೆರೆತು ಆಸೆ-ನಿರಾಸೆ ಹತಾಸೆ ಎಲ್ಲವೂ ಒಟ್ಟಾಗಿ ಅಭಿವ್ಯಕ್ತಿ ಪಡೆದಿರುವುದರಿಂದಲೇ 'ಕಪ್ಪು ಕಾಡಿನ ಹಾಡು' ವಿನ ಕವನಗಳು ವಾಸ್ತವಿಕದ ಸಂಕೀರ್ಣತೆಯನ್ನು ಹಿಡಿಯುತ್ತವೆ ಎಂದು ಮೊದಲು ನಾನು ಹೇಳಿದುದು.

'ದೋಣಿಯ ಹಾಡು'ವಿನ ಆಂತರಿಕ ಭಾವನೆಗಳು, 'ದೋಣಿಯ ಹಾಡು' ಸಾಂಕೇತಿಕವಾಗಿ ನಾಯಕನ ಜೀವನದ ಹಾಡಾಗುತ್ತದೆ. ಇಲ್ಲಿಯ ಸಂಕೇತಗಳಲ್ಲೂ ಚೈತನ್ಯ-ಭಾಷೆಯಲ್ಲಿ ಸಂಯಮ ಕಾಣಬಹುದು. 'ಹೂ ಬಳ್ಳಿ', 'ನದಿ,' ಗಿಡದ ಮೊಗ್ಗು' 'ಹಾಡ ಹೊತ್ತ ದೋಣಿ', 'ಬಳ್ಳಿ', 'ಬೆಳದಿಂಗಳು' ಸುಂದರ ಕನಸುಗಳ ಹೊತ್ತ ಯುವಕನನ್ನು. ಆ ಸುಂದರ ಕನಸುಗಳ ಹೃದಯ ಸಾಮಾಜಿಕ ಸ್ಥಿತಿಯಲ್ಲಿ ವಿರೂಪಗೊಂಡ ಸ್ಥಿತಿ ಇಲ್ಲಿ ವ್ಯಕ್ತವಾಗಿದೆ.

ಮರ ಮರದ ಮೇಲೆಲ್ಲಾ ನೋವು ಕೂಗುತ್ತಿತ್ತು
ಸತ್ತವರ ನಿಟ್ಟುಸಿರು ಪ್ರೇತವಾಗಿ :

ಮುರಿದ ಮನ ಇರಿದ ಎದೆ
ನನ್ನೆದೆಯ ನದಿ ಬತ್ತಿ ಒಣಗಿ ಹೋಗಿತ್ತು
ಉರಿದ ಹೂ ಬಳ್ಳಿಗಳ
ಬೂದಿ ಸುರಿದಿತ್ತು.

ಸಾಮಾಜಿಕ ಸ್ತರಗಳಲ್ಲಿ ಬೆಂದುಹೋದ ಆಸೆಗಳ ನೋವಿನ ಆಳ ಧ್ವನಿ ಇಲ್ಲಿ ವ್ಯಕ್ತಗೊಂಡಿದೆ.

'ನಲವತ್ತೇಳರ ಸ್ವಾತಂತ್ರ್ಯ' ವಾಚ್ಯವಾಗಿದ್ದು, ಹಿಂದಿನ ಸಂಕಲನದ ಕವನಗಳ ಜಾಡನ್ನೇ ಹಿಡಿದಿದೆ.

'ಸಂಪಿಗೆಯ ಮರದಲ್ಲಿ'ಯೂ ಸಹ ಉಕ್ಕುಕ್ಕಿ ಬಂದ ಕೋಪಮಾತ್ರವಿಲ್ಲ. ಹೇಳಬೇಕಾದ ಸಂಗತಿ ಪಕ್ವತೆಯಲ್ಲಿ ವ್ಯಕ್ತಗೊಳ್ಳುವ ರೀತಿ : 'ಮಲಗಿದ್ದ ಹಕ್ಕಿಗಳು ಮೇಲೇಳಲಿಲ್ಲ'

ಈ ನೆಲದ ಹೂ ಬಳ್ಳಿ ಹಕ್ಕಿ ಮಕ್ಕಳಿಗೆಲ್ಲ
ಬದುಕ ಬೇಕೆಂದವರ ಬಗೆದರಲ್ಲೋ.

ನೋವು ಸಂಕೇತಗಳಲ್ಲಿ ಪಕ್ವತೆ ಪಡೆದಿದೆ.

'ಕೊಳಗೇರಿಯ ಕವನ' ಲಯಬದ್ಧವಾದ ಹಾಡಾಗಿ ಸಾಗುತ್ತದೆ.

ರಂಗಭೂಮಿಯ ಮಿತಿಯಿಂದಲೇ ನೋಡಬೇಕಾಗಿರುವ ರಂಗಭೂಮಿಯ ಗೀತೆಗಳಲ್ಲಿ ಪುಟ್ಟಪ್ಪನ ಕ್ರೌರ್ಯ, ಅಧಿಕಾರ ಕುರಿತ 'ಶ್ರೀಮಾನ್ ಪುಟ್ಟಪ್ಪನ ಹಾಡುಗಳು' ವ್ಯಂಗ್ಯದ ಒತ್ತು ಪಡೆದಿವೆ. ಜನಪದಲಯದಲ್ಲಿ, ಸೌಮ್ಯಭಾಷೆಯಲ್ಲಿ ಸಾಗುವ 'ಭೂತನ ಕತೆ'-ಭೂತಪ್ಪ ಹಾಗೂ ಮಂಜುನಾಥನ ಐತಿಹಾಸಿಕ ಹೋರಾಟವನ್ನು ಹೇಳುತ್ತದೆ. 'ಗುಡಿಗೆ ಹೋಗುವವರ ಹಾಡು' 'ತಬರನ ಕಥೆ' 'ದಾರಿಯಾವುದೋ' ಪ್ರಾಸಬದ್ಧ ಲಯದಲ್ಲಿ ಸಾಗುತ್ತವೆ. 'ಚೋಮ' ನಾಟಕದ ಎರಡು ಹಾಡುಗಳು ಪ್ರಾಸಬದ್ಧವಾಗಿದ್ದರೂ ವಾಚ್ಯವಾಗಿಲ್ಲ.

'ಕಪ್ಪು ನಾಯಿ ಕೆಂಪಾಗುವುದಿಲ್ಲ'
'ಹೀಗೆನ್ನುವ ಮುದುಕಿಗೆ ಸಾವೇ ಇಲ್ಲವೇ
ಚೋಮನಿಗೆಂದು ನೆಲವೇ ಬೇಡವೇ.'

ಈ ಸಾಲುಗಳು ಕಾವ್ಯಾತ್ಮಕವಾಗಿವೆ. 'ಹೆಂಡಕ್ಕೆ ಸಾವಿಲ್ಲವೋ' ನ 'ಜನರ ಎದೆಯಲ್ಲಿ ಹೆಪ್ಪುಗಟ್ಟಿದ ನೋವು ಕೆರಳಿ ನಿಂತೋ' ಎನ್ನುವ ಸಾಲು ಗಮನ ಸೆಳೆಯುತ್ತದೆ. ಹೀಗೆ 'ಸಾಮಾನ್ಯನ ಹಾಡು' ಸಹ ಕೆಲವು ಉತ್ತಮ ಸಾಲುಗಳನ್ನು ಹೊಂದಿದೆ. ರಾಜ, ಗೌಡ, ಜಮೀನ್ದಾರುಗಳ ಹಾಗೂ ಸ್ವತಂತ್ರ ಭಾರತದಲ್ಲೂ ಜೀತಗಾರರಾಗಿ ಉಳಿದ ದಲಿತರ ನೋವನ್ನು ಅಭಿವ್ಯಕ್ತಿಸುವ ಈ ಸಾಲುಗಳು :

ಸ್ವಾತಂತ್ರ್ಯದ ಸೂರ್ಯ ಹುಟ್ಟಿದರುಂ
ಕಿರಣ ಕಾಣಲಿಲ್ಲ.
ಸೂರ್ಯನ ಎದುರು ಉಳ್ಳವರೊಡ್ಡಿದ

ಮೋಡ ಚದುರಲಿಲ್ಲ.
ಅಸ್ಥಿ ಪಂಜರದ ಜೋಪಡಿಗೆ
ದೀಪ ಹಚ್ಚಲಿಲ್ಲ.

ಈ ಸಂಕಲನದ ರಂಗಭೂಮಿಯ ಹಾಡುಗಳಲ್ಲಿ ಮಿತಿ ಇದೆ. ರಾಗಬದ್ಧವಾಗಿಸುವ ಜೊತೆಗೆ ನಿರ್ದಿಷ್ಟ ಸಂದರ್ಭದ ಹಿನ್ನೆಲೆಯಲ್ಲಿ ಹುಟ್ಟಿಕೊಂಡಿರುವುದರಿಂದ ಈ ಹಾಡುಗಳ ಮಿತಿ ಪ್ರಶ್ನೆಗೆ ನಿಲುಕುವುದಿಲ್ಲ. ರಂಗಭೂಮಿಯ ಗೀತೆಗಳನ್ನು 'ನಲವತ್ತೇಳರ ಸ್ವಾತಂತ್ರ್ಯ' 'ರಾಣಿಯ ಹಾಡು' 'ಮಾಟ ಆಗಿತ್ತು' 'ಕೊಳಗೇರಿಯ ಹಾಡು' ಮುಂತಾದ ಕವನಗಳನ್ನು ಈ ಸಂಕಲನದಿಂದ ಆಚೆ ಇಟ್ಟಿದ್ದರೆ ಈ ಕವನ ಸಂಕಲನವು ಪ್ರಬುದ್ಧತೆಯ ದೃಷ್ಟಿಯಿಂದ ಉತ್ತಮವಾಗುತ್ತಿತ್ತು.

ಶ್ರೀ ಸಿದ್ಧಲಿಂಗಯ್ಯನವರ ಈ ಎಲ್ಲಾ ಕಾವ್ಯ ಬೆಳವಣಿಗೆಯೊಂದಿಗೆ ಸಾಹಿತ್ಯದ ಬಗ್ಗೆ ಒಂದು ಮೂಲಭೂತ ಪ್ರಶ್ನೆ ಹುಟ್ಟುತ್ತದೆ. ದಲಿತ ಸಾಹಿತ್ಯ ವಿಮರ್ಶೆಗೆ ಭಿನ್ನ ಅಳತೆಗೋಲುಗಳು ಬೇಕೆನ್ನುವ, ಒಟ್ಟು ಪ್ರಸ್ತುತ ವಿಮರ್ಶೆಯ ಅಳತೆಗೋಲುಗಳಿಗೆ ದಲಿತ ಸಾಹಿತ್ಯ ಒಳಪಡುವುದಿಲ್ಲ ಎನ್ನುವ ವಾದವನ್ನು ಸಿದ್ಧಲಿಂಗಯ್ಯನವರ ಈ ಕವನ ಸಂಕಲನ ಸುಳ್ಳಾಗಿಸುತ್ತದೆ. ಸಾಮಾಜಿಕ ಸ್ತರಗಳಲ್ಲಿಯೇ ಕೆಲಸ ಮಾಡುವ ಸಿದ್ಧಲಿಂಗಯ್ಯನವರ ಕವನಗಳಿಗೆ ಹೃದಯ ಪಕ್ವಗೊಳಿಸುವ ಶಕ್ತಿಯಿದೆ. ಪ್ರತಿಭಟನೆಯ ಶಕ್ತಿ ವ್ಯಕ್ತಿನೆಲೆಯಲ್ಲಿಯೇ ಆಳವಾಗಿ ಹುಟ್ಟಿಸುವ ಶಕ್ತಿ ಈ ಕವನಗಳಲ್ಲಿದೆ.

**ಎಚ್. ಎಸ್. ಚಂಪಾವತಿ**

—o—

"A missionary blamed in African flock for walking undressed" "And what about yourself ?" they pointed to his visage, are not you, too somewhere naked ?" "well but this is my face" "yet in us," retorted the natives, "everywhere it is face." So in poetry any verbal element is converted in to a figure of poetic speech"

**Roman Jacobson**



# ಕನಸಿಗೊಂದು ಕಣ್ಣು

## ಎರಡು ಬೀದಿ ಮಾತು

ಬೆಂಗಳೂರು ಸುಂದರ ನಗರವೆಂದು ಬಿರುದನ್ನು ಪಡೆದಿದೆ. ಆದರೆ ಎಲ್ಲಾ ಸುಂದರವಾದ ಜಾಗಗಳಲ್ಲೂ ಮೂಗು ಮುಚ್ಚಿಕೊಳ್ಳುವ ಪ್ರದೇಶಗಳು ಇದ್ದೇ ಇರುತ್ತವೆ. ಇಂಥ ಪ್ರದೇಶಗಳಲ್ಲಿ ಬೆಂಗಳೂರಿನ ನೂರಾರು ಕೊಳಚೆ ಪ್ರದೇಶಗಳನ್ನು ಬಿಟ್ಟು ಕಲಾಸಿಪಾಳ್ಯಂನಂಥ ಜಾಗದಲ್ಲಿ ಮನುಷ್ಯ ಬದುಕುತ್ತಾನೆ ಎನ್ನುವುದೇ ದೊಡ್ಡ ಸಂಗತಿ. ಒಂದು ದಿನಕ್ಕೆ ಎಷ್ಟು ಅಂಶದಷ್ಟು ವಿಷವನ್ನು ನೈಸರ್ಗಿಕವಾಗಿ ಸೇವಿಸುತ್ತಾನೆಂಬುದನ್ನು ಯಾರೂ ನಿಖರವಾಗಿ ಹೇಳಲಾರರು. ಇಂಥ ಜಾಗಗಳಿಗೆ ಶಿವಾಜಿನಗರದ ಹೃದಯದ ಮಧ್ಯದಲ್ಲಿಯೂ ಕೊರತೆಯಿಲ್ಲ.

ಕಳೆದ ಹದಿನೈದು ವರ್ಷಗಳಿಂದ ಈ ಉಚ್ಚಿ ಹರಿಯುವ ಕಲಾಸಿಪಾಳ್ಯಂನ್ನು ನೋಡುತ್ತ ಬಂದಿದ್ದೇನೆ. ಇಲ್ಲಿಯ ಸಾರಾಯಿ ಅಂಗಡಿಗಳು, ಹೆಂಡದಂಗಡಿಗಳು, ಅಲ್ಲಿ ಮಾರುವ ಅಸಹ್ಯ ರೀತಿಯ ಮಾಂಸವ ತುಂಡುಗಳು ಮನುಷ್ಯನಿಗೆ ಸುಂದರ ವಸ್ತುಗಳ ಬಗ್ಗೆ ಪ್ರೀತಿ ಹೋಗುವಷ್ಟರ ಮಟ್ಟಿಗೆ ಹೊಲಸಾಗಿರುತ್ತವೆ. ಇಲ್ಲಿ ಬರುವ ಜನರ ಬಗ್ಗೆ ಹೇಳಲೇಬೇಕಾಗಿಲ್ಲ. ಯಾಕೆಂದರೆ ಎಷ್ಟು ಹೇಳಿದರು ಅವರು ನಮ್ಮ ಊಹೆಗೆ ಸಿಲುಕದವರು. ಅಥವಾ ತಮಗೆ ಇದಕ್ಕಿಂತ ಬೇರೊಂದು ಬದುಕು ಇದೆ ಎಂಬುದನ್ನು ಮರೆತವರು. ಅಥವಾ ಮರೆಸಲ್ಪಟ್ಟವರು. ಹಾಗೆಯೇ ಇಲ್ಲಿ ಬೀದಿ ಬೀದಿಯಲ್ಲಿ ಬೆಳಕಿನಲ್ಲಿಯೇ ಬಣ್ಣ ಬಳಿದುಕೊಂಡು ಹೊಟ್ಟೆ ಪಾಡಿಗಾಗಿ ಮೈಮಾರಿಕೊಳ್ಳುವ ಹೆಂಗಸರು, ಅವರನ್ನು ಸಂದಿಗೊಂದಿಗಳಿಗೆ ಕರೆದೊಯ್ದು, ಚೌಕಾಸಿ ಮಾಡಿ ದುಡ್ಡು ಕಿತ್ತುಕೊಳ್ಳುವ ಪೋಲೀಸಿನವರು, ಭೂತಗಳ ರೀತಿಯಲ್ಲಿ ಕಾಣಿಸಿಕೊಳ್ಳುತ್ತಿರುತ್ತಾರೆ. ಇದಕ್ಕೆ ಹೊಂದಿಕೊಂಡ ಹಾಗೆಯೇ ಕೃಷ್ಣರಾಜೇಂದ್ರಮಾರ್ಕೆಟ್ಟು ಇರುವುದರಿಂದ ಎಲ್ಲಾ ರೀತಿಯ ವ್ಯವಹಾರಗಳಿಗೆ ಕೇಂದ್ರಸ್ಥಾನವಾಗಿದೆ.

ಇಷ್ಟಪಟ್ಟೋ, ಇಷ್ಟಪಡದೆಯೋ ದಿನನಿತ್ಯ ಓಡಾಡಬೇಕಾಗಿರುವ ಈ ಕಲಾಸಿಪಾಳ್ಯಂ ನನಗೆ ಗೊತ್ತಿಲ್ಲದೆಯೇ, ನನ್ನ ಬದುಕಿನ ಅಂಗವಾಗಿಬಿಟ್ಟಿದೆ. ಆ ಕಡೆ ಹೋಗದಿದ್ದ ಘಳಿಗೆಗಳು ನಿಜವಾಗಿಯೂ ಸುಖಮಯವ ಘಳಿಗೆಗಳು. ಯಾಕೆಂದರೆ ಭಾರತದಂತಹ ಸುಂದರ ರಾಜಕೀಯ ವ್ಯವಸ್ಥೆಯಲ್ಲಿ 'ಸುಖ' ಎನ್ನುವುದು ನಮಗೆ ಸ್ವಾಭಾವಿಕವಾಗಿರದೆ ; ಆರೋಪಿಸಿಕೊಂಡು ಬದುಕಬೇಕಾದ ಸಾಧನವಾಗಿರುತ್ತೆ. ಇಂಥ ವಾತಾವರಣದಲ್ಲಿ ಕಳೆದ ಒಂದು ದಶಕದಿಂದ ಕಲಾಸಿಪಾಳ್ಯಂನ ಮುಖ್ಯರಸ್ತೆಯಲ್ಲಿ ದಿನನಿತ್ಯ ಗೋಡೆಗೊರಗಿ ನಿಂತಿರುವ ಹೆಣ್ಣೊಬ್ಬಳನ್ನು ನೋಡುತ್ತ ಬಂದಿದ್ದೇನೆ. ಸುಮಾರು ನಲವತ್ತೈದು ಅಥವಾ ಐವತ್ತು ವರ್ಷವಿರಬಹುದಾದ ಈ ಹೆಣ್ಣು ಅಕ್ಕಪಕ್ಕ ಚಲಿಸದೆ ಶಿಲೆಯ ರೀತಿಯಲ್ಲಿ ನಿಂತಿರುವುದನ್ನು ಸದಾ ಕಾಣುತ್ತಿದ್ದೇನೆ. ಮೊದಮೊದಲು ನನ್ನ ಕುತೂಹಲದ ಎಲ್ಲೆಯಿಂದ ದೂರನಿಂತ ಈಕೆಯನ್ನು ಹುಚ್ಚಿ ಎಂದು ಭಾವಿಸಿಕೊಂಡಿದ್ದೆ. ಮತ್ತೆ ಕೆಲವು ದಿನಗಳ ನಂತರ ಕುಡಿದು ಗಂಭೀರವಾಗಿ ನಿಂತಿರಬಹುದೆಂದುಕೊಂಡಿದ್ದೆ. ಆದರೆ ಅದ್ಯಾವುದು ವಾಸ್ತವದ ಮಾತಲ್ಲದಿರಬಹುದು ; ಯಾಕೆಂದರೆ, ಆಕೆಯೊಡನೆ ಮಾತಾಡಲಾರದ ಅಥವಾ ಪುಟ್ಟ ಹುಡುಗರ ರೀತಿಯಲ್ಲಿ ರೇಗಿಸುವ ಗುಣಗಳಿಂದಲೂ ದೂರವಿದ್ದಾಗ ಯಾವುದೂ ಸ್ಪಷ್ಟವಾಗಿ ಗೋಚರಿಸದೇ ಹೋಗಬಹುದು. 'ದೂರದ ಬೆಟ್ಟ ನುಣ್ಣಗೆ' ಎನ್ನುವಂತೆ.

ವಿಚಿತ್ರ ರೀತಿಯಲ್ಲಿ ಕಾಣುವ ಈಕೆ ಐದೂವರೆ ಅಡಿಗಳಷ್ಟು ಎತ್ತರವಿರಬಹುದು. ಸಾಧಾರಣ ಸೀರೆಯನ್ನುಟ್ಟು ಮುಖದ ತುಂಬ ಕುಂಕುಮವನ್ನು ಬಳಿದುಕೊಂಡು, ರಾಕ್ಷಸಿಯರ ಪಾತ್ರಗಳನ್ನು ನೆನಪಿಗೆ ತರುವ ರೀತಿಯಲ್ಲಿ ನಡುವಿನ ಸುತ್ತ ನಾನಾ ರೀತಿಯ ಚಿಂದಿ ಬಟ್ಟೆಗಳನ್ನು ಸುತ್ತಿಕೊಂಡಿರ್ತಾಳೆ. ಮೇಲ್ನೋಟಕ್ಕೆ ಹುಚ್ಚಿಯಂತೆ ಕಾಣುವ, ಈಕೆ ಬೇರೆಯವರಿಗೆ ಕಿರುಕುಳ ಕೊಡುವ ಹುಚ್ಚುತನವಿಲ್ಲ. ಅಂದರೆ ಕೂಗಾಟವಿಲ್ಲ, ಕಿರಿಚಾಟವಿಲ್ಲ. ಒಂದು ರೀತಿಯ ಅನುಭಾವಿಯಂತೆ ಯಾವಾಗಲೂ ಗಂಭೀರಳಾಗಿ ಕಾಣುವ ಈ ವಿಚಿತ್ರ ಹೆಣ್ಣಿನ ಹಿಂದಿನ ಬದುಕನ್ನು ಅರಿಯುವ ಕುತೂಹಲ ಯಾರಿಗೆ ಬೇಕಾದರೂ ಬರಬಹುದು. ಅಂಥ ಕುತೂಹಲದ ಬೆನ್ನ ಹತ್ತಿ ಹೋದಾಗ ; ಆಕೆಯಿಂದ ಒಂದು ಶಬ್ದದಷ್ಟು ಧ್ವನಿಯೂ ದೊರಕಲಿಲ್ಲ. ಈ ಏಕಾಗ್ರತೆಗೆ ಕಾರಣವನ್ನು ಹುಡುಕಲು ಉತ್ಸುಕನಾದಾಗಲೆಲ್ಲ ಮಾತು ಮೌನದಲ್ಲಿಯೇ ಕರಗಿ ಹೋಗುತ್ತಿದೆ ಅನ್ನಿಸುತ್ತಿತ್ತು. ಹಾದಿಯಲ್ಲಿ ಸಾಗುವ ಸಾವಿರಾರು ವಾಹನಗಳ ಕರ್ಕಶ ಧ್ವನಿಯನ್ನು ಇಷ್ಟು ವರ್ಷ ಬೆಳಗ್ಗೆಯಿಂದ ಸಂಜೆಯವರೆವಿಗೆ ಸಹಿಸಿಕೊಂಡಿದ್ದಾಳೆಂಬುದೇ ಆಶ್ಚರ್ಯದ ಸಂಗತಿ. ಎಷ್ಟೋ ಬಾರಿ ಹುಚ್ಚರೂ ರೇಗಿಸಿದಾಗಲೂ ಶಬ್ದವನ್ನು ಕಳೆದುಕೊಂಡವಳು.

ಈಕೆ ಎಲ್ಲಿಂದ ಬಂದವಳು ? ಅಮ್ಮ ಅಪ್ಪ ಯಾರು ? ಮದುವೆಯಾಗಿತ್ತೆ ? ಮಕ್ಕಳಿದ್ದಾರೆಯೇ ? ಎಂಬ ಪ್ರಶ್ನೆಗಳ ಮುಂದೆ ಒಂದಷ್ಟು ತಿಳಿಯುವ ಆಸೆಯಿಂದ

ಕೆಲವು ದಿನಗಳ ಹಿಂದೆ ಹತ್ತು ಗಂಟೆಯ ರಾತ್ರಿಯ ಸಮಯದಲ್ಲಿ ಟೇಪ್‌ರಿಕಾರ್ಡರ್ ಕೈಯಲ್ಲಿ ಹಿಡಿದು ಪ್ರಶ್ನೆಗಳನ್ನು ಹಾಕತೊಡಗಿದಾಗ ; ಒಂದು ಪ್ರಶ್ನೆಗೂ ಉತ್ತರ ಬರಲಿಲ್ಲ. ಕೊನೆಯ ಪಕ್ಷ ತುಟಿಯನ್ನು ತೆರೆಯಲಿಲ್ಲ. ಆದರೆ ಅಂದು ನಿಜವಾಗಿಯೂ ರಿಕಾರ್ಡ್ ಮಾಡಿಕೊಂಡದ್ದು : ಆ ರಸ್ತೆಯಲ್ಲಿಯ ಜನರ ಗದ್ದಲವನ್ನು ಮತ್ತು ವಾಹನ ಗಳ ಅಸಹ್ಯ ಧ್ವನಿಯನ್ನು.

ನಿರಾಶನಾಗಿ ಮನೆಗೆ ತೆರಳಿದೆ. ಮಾರನೆಯ ದಿನ ಸಂಜೆ ಅಕ್ಕಪಕ್ಕದವರನ್ನು ಕೇಳಲು ಹೋದಾಗ ; ನನ್ನನ್ನು ವಿಚಿತ್ರ ರೀತಿಯಲ್ಲಿ ನೋಡತೊಡಗಿದರು. ಒಬ್ಬ, "ಆಕೆಗೂ ನಿಮಗೇನು ಸಂಬಂಧ ?" ಎಂದು ಕೇಳಿದ. ಮತ್ತೊಬ್ಬ "ಅವಳು ನಿಮ್ಮಲ್ಲಿಂದ ಓಡಿಬಂದಿರುವಳೇನು ?" ಎಂದು ನನಗೆಯೇ ಇರಿಸು ಮುರಿಸಿನ ಪ್ರಶ್ನೆಯನ್ನೆಸೆದ. ಆದರೆ ಅವಕ್ಕೆ ನಗುತ್ತಲೇ, ಈಕೆಯನ್ನು ಹತ್ತು ವರ್ಷದಿಂದ ಇಲ್ಲಿ ನೋಡುತ್ತಿದ್ದೇನೆ. ಆದ್ದರಿಂದ ಒಂದಷ್ಟು ತಿಳಿಯಲು ಆಸೆಯಿಂದ ಬಂದಿದ್ದೇನೆ ಎಂದಾಗ, "ಇಂಥ ತಲೆ ತಿರುಕರ ಬಗ್ಗೆ ತಿಳಕೊಂಡು ತಾನೆ ಏನು ಮಾಡಬೇಕ್ರಿ ?" ಎಂದು ತನ್ನ ವ್ಯಾಪಾರದಲ್ಲಿ ತಲ್ಲೀನನಾದ. ಅವನ ವ್ಯಾಪಾರ ಹಳೆಯ ಬಟ್ಟೆಗಳನ್ನು ಮಾರುವುದು. ಅದೊಂದು ಪುಟ್ಟ ಷೋ ರೂಂ ಇದ್ದ ಹಾಗೆ. ಆ ಬಟ್ಟೆಗಳು ಎಲ್ಲೆಲ್ಲಿಂದ ಬರುತ್ತವೆ ಎಂದು ಹೇಳು ವುದು ಕಷ್ಟ. ಅದು ಕದ್ದು ಮಾರಿ ಹೋಗಿರುವ ಬಟ್ಟೆಗಳಿರಬಹುದು. ಅಥವಾ ದಿನಕ್ಕೆ ಮೂರು ಬಾರಿ ಬಟ್ಟೆ ಬದಲಾಯಿಸುವ ಮಂದಿಯದಿರಬಹುದು. ಆದರೂ ಅವುಗಳನ್ನೆಲ್ಲ ಓರಣವಾಗಿ ಜೋಡಿಸಿಟ್ಟಿರುವುದಕ್ಕೆ ಮೆಚ್ಚಿಕೊಂಡು ಹೊರಗೆ ಬರುವಾಗ ; ಅದೇ ಪ್ರದೇಶದಲ್ಲಿ ದಿನನಿತ್ಯ ಮಿಕಗಳ ರೀತಿಯಲ್ಲಿ ತಮ್ಮ ಮೈ ಮಾರಿಕೊಳ್ಳುವ ಹೆಂಗಸರು ಬಣ್ಣ ಬಣ್ಣದ ಸೀರೆಗಳಿಗಾಗಿ ನುಗ್ಗಿದರು.

ಪಕ್ಕದ ಅಂಗಡಿಗೆ ಹೋದೆ. ಅಲ್ಲೊಬ್ಬ ಹುಡುಗ ಯಾವುದೋ ಗಡಿಯಾರದ ಅವನ ವ್ಯಾಪಾರ ನಾಡಿಯನ್ನು ಸರಿಪಡಿಸಲು ತನ್ನ ಕೈಯಲ್ಲಿದ್ದ ಪುಟ್ಟ ಸಲಕರಣೆಯಿಂದ ಅದರ ನರಗಳಿಗೆ ರಕ್ತ ಹರಿಸುತ್ತಿದ್ದ. ಹಳೆಯ ಗಡಿಯಾರಗಳ ಮಾರಾಟ ಹಾಗೂ ಅವುಗಳ ರಿಪೇರಿ. ನನ್ನನ್ನು ನೋಡಿದಾಕ್ಷಣ, ಬಂದ ವಿಷಯ ಕೇಳಿದ. ಹೇಳಿದೆ. ಅವನು ಮೊದಲಿಗೆ ಬೇಜಾರು ಮಾಡಿಕೊಂಡರೂ, ನಂತರ "ಬಿಡ್ರೀ, ಆ ಹುಚ್ಚಿಯ ಬಗ್ಗೆ ತಲೆ ಕೆಡಿಸಿಕೊಂಡು ಏನು ಮಾಡುತ್ತೀರಿ ?" ಎಂದ. ಒತ್ತಾಯ ಮಾಡಿದ ಮೇಲೆ ಒಂದಷ್ಟು ಹೇಳಿದ. ಅವನು ಹೇಳಿದ ಪ್ರಕಾರ : ಆಕೆ ಮಹಾರಾಷ್ಟ್ರದಿಂದ ಬಂದವಳು. ಒಮ್ಮೆ ಯಾರೋ ಹುಡುಕಿಕೊಂಡು ಬಂದಿದ್ದರು. ಆದರೆ ಅವರು ಎಷ್ಟು ಪ್ರಯತ್ನಿಸಿದರೂ ಅವರ ಹಿಂದೆ ಆಕೆ ಹೋಗಲಿಲ್ಲವಂತೆ. ಅವರು ಯಾರೂ ಅಂತ ಕೇಳಿದಾಗ ; ಅದನ್ನೆಲ್ಲ ಯಾರು ಸ್ವಾಮಿ ಕೇಳೋದಿಕ್ಕೆ ಹೋಗ್ತಾರೆ. ನಾವಾಯಿತು, ನಮ್ಮ ಕೆಲಸವಾಯಿತು ಎಂದು ಮುಂದೆ ಹೇಳಲು ಮನಸ್ಸಿಲ್ಲವೆಂಬಂತೆ ತಲೆ ತಗ್ಗಿಸಿ ತನ್ನ ಕೆಲಸದಲ್ಲಿ ನಿರತನಾಗಿದ್ದ.

ಇವರ್‍ಯಾರಿಂದಲೂ ಏನೂ ಸಿಗುವುದಿಲ್ಲವೆಂದು ಸುಮ್ಮನಾದೆ. ಒಂದಷ್ಟು ದಿನ ಕಳೆಯಿತು. ಅದೊಂದು ದಿನ ರಾತ್ರಿ ಒಂಬತ್ತು ಗಂಟೆಯ ಸಮಯದಲ್ಲಿ ಬಸ್ಸಿಗೆ ಹೋಗುತ್ತಿದ್ದೆ. ಮಳೆ ಬಿದ್ದಿದ್ದರಿಂದ ರಸ್ತೆಯೆಲ್ಲ ಕೊಚ್ಚೆಯಾಗಿತ್ತು. ಅದನ್ನು ಕೊಚ್ಚೆ ಎನ್ನುವುದಕ್ಕಿಂತ ಉಚ್ಚೆ ಹರಿಯುತ್ತಿತ್ತು ಎನ್ನುವುದು ವಾಸಿ. ಎಚ್ಚರಿಕೆಯಿಂದ, ತುದಿಗಾಲಿನ ಮೇಲೆ ನಡೆಯುತ್ತಿದ್ದೆ. ಅಕಸ್ಮಾತ್ ತಲೆಯೆತ್ತಿ ನೋಡಿದೆ. ಎದುರು ಗಡೆ ಇದ್ದ ಸಾರಾಯಿ ಅಂಗಡಿಯ ಕಡೆಯಿಂದ ಆಕೆ ಬರುತ್ತಿದ್ದಳು. ಕೈಯಲ್ಲಿ ಒಂದು ದೊಣ್ಣೆಯಿತ್ತು. ಅದು ಆಕೆಯ ನಡಿಗೆಯ ಗತ್ತಿಗೆ ವಾಕಿಂಗ್ ಸ್ಟಿಕ್ ಆಗಿತ್ತು. ಇದನ್ನು ನೋಡಿ ಅಚ್ಚರಿಯಿಂದ ಒಂದು ಘಳಿಗೆ ಹಾಗೆಯೇ ನಿಂತೆ. ಮುಂದೆ ನಡೆದಳು. ನಾನು ಸಾರಾಯಿಯ ಅಂಗಡಿಯ ಒಳಕ್ಕೆ ಹೋದೆ. ಅಲ್ಲಿ ಮಳೆಯಿಂದ ತೊಯ್ದವರು, ಸಾರಾಯಿಯಿಂದ ತೊಯ್ದವರು ಎಲ್ಲರೂ ಇದ್ದರು. ಎಲ್ಲರೂ ಅವರವರ ಲೋಕದಲ್ಲಿ ತಲ್ಲೀನರಾಗಿದ್ದರು. ಅಥವಾ ತಮ್ಮ ತಮ್ಮ ಪ್ರಪಂಚದಲ್ಲಿ ವಿಹರಿಸುತ್ತಿದ್ದರೆನ್ನುವುದು ಸರಿಯೆನ್ನಿಸುತ್ತೆ. ಅಥವಾ ಇನ್ನೂ ಮುಂದೆ ಹೋಗಿ ಹೇಳಬೇಕೆಂದರೆ ; ಹೆಚ್ಚು ಅಂತರ್ಮುಖಿಗಳಾಗಿ, ತಾತ್ಕಾಲಿಕವಾಗಿ ನೆಮ್ಮದಿಯನ್ನು ಪಡೆಯುತ್ತಿದ್ದವರು ಎನ್ನ ಬಹುದು. ಅಲ್ಲಿಯ ಪ್ರತಿಯೊಬ್ಬರ ಕಥೆಯು ಹೊಡೆದ ಕನ್ನಡಿಯನ್ನು ಮತ್ತೆ ಕಲಾತ್ಮಕವಾಗಿ ಜೋಡಿಸಿದಂತೆಯೂ ಇರಬಹುದು.

ನೇರವಾಗಿ ಆ ಜನರ ನಡುವೆ ನುಗ್ಗಿ ಯಜಮಾನನ ಹತ್ತಿರ ಹೋದೆ. ಅಲ್ಲೊಬ್ಬ ಚೌಕಾಸಿ ಮಾಡುತ್ತಿದ್ದ. ಚೌಕಾಸಿ ಎನ್ನುವದಕ್ಕಿಂತ ಜಬರದಸ್ತಿನಿಂದ ಕೇಳುತ್ತಿದ್ದ. ಅವನೊಬ್ಬ ಹುಚ್ಚನಾಗಿದ್ದ. ಕುಡಿದವನೇ ಕಂಪನಿ ನಾಟಕಗಳ ನಾಯಕನ ರೀತಿಯಲ್ಲಿ ಠೀವಿಯಿಂದ ನಡೆದುಹೋದ. ಅವನು ಹೋದಮೇಲೆ ಯಜಮಾನ ಒಳ್ಳೆಯ ಹುಚ್ಚನನ್ಮಗ ಎಂದು ಮಂದಹಾಸದಿಂದ ತನ್ನ ಕೆಲಸದಲ್ಲಿ ತೊಡಗಿದ.

ಯಜಮಾನನ ಹತ್ತಿರ ಹೋಗಿನಿಂತೆ. ನನ್ನನ್ನು ನೋಡಿ, ಎಂದೂ ನೋಡದವನಂತೆ ವಿಚಿತ್ರವಾಗಿ ನೋಡಿ, "ಎಷ್ಟು ಬೇಕು ?" ಎಂದ. "ಇಲ್ಲ ಅದಕ್ಕಲ್ಲ ಬಂದಿರುವುದು" ಎಂದೆ. ಅವನಿಗೆ ನಾನು ವಸೂಲಿಯ ಮನುಷ್ಯ ಅನ್ನಿಸಿರಬೇಕು, ಅಸಡ್ಡೆಯಿಂದ "ನಿಮ್ಮ ಗೋಳು ಯಾವಾಗಲೂ ನನಗೆ ತಪ್ಪಿದ್ದಲ್ಲ" ಎಂದು, ತನ್ನ ಕೆಲಸದ ಬಗ್ಗೆ ತಲ್ಲೀನತೆ ಬೆಳೆಸಿಕೊಂಡ. ನನಗೆ ನಗು ಬಂತು. "ಸ್ವಾಮಿ ನಾನು ಬಂದಿರೋದು ವಸೂಲಿಗಲ್ಲ. ನಿಮ್ಮಲ್ಲಿ ಒಬ್ಬಳು ಹುಚ್ಚಿಯ ರೀತಿಯ ಹೆಂಗಸು ಬರ್‍ತಾಳಲ್ಲ, ಆಕೆ ದಿನಾಲು ಕುಡಿಯೋದಿಕ್ಕೆ ಬರ್‍ತಾಳಾ ?" ಎಂದೆ. "ಅವಳು ನಿಮಗೇನಾಗಬೇಕು ?' "ಏನೂ ಇಲ್ಲ." "ಹಾಗಾದರೆ ಸುಮ್ಮನೆ ಹೋಗಿ, ಅದಕ್ಯಾಕೆ ತಲೆ ಕೆಡಿಸಿಕೊಳ್ತೀರಿ ? ಎಲ್ಲೆಲ್ಲಿಂದಲೋ ಬಂದಿರ್‍ತಾರೆ. ಅವರು ಎಲ್ಲಿ ಹುಟ್ಟಿದರು ? ಎಲ್ಲಿ ಬೆಳೆದರು ಎಂಬುದನ್ನು ನಾವು ಪತ್ತೆ ಹಚ್ಚೋದಿಕ್ಕೆ ಆಗ್ತಾದಾ ? ಹಾಗೆ ನೋಡಿದರೆ

ಇಲ್ಲಿರೋರೆಲ್ಲ ಅದೇ ಥರದವರು" ಎಂದ. ಮತ್ತೆ ಏನೂ ಮಾತಾಡದೆ ಹೊರಗೆ ಬಂದೆ. ಎಲ್ಲರೂ ಹುಚ್ಚರಂತೆ ಮನೆಗೆ ಓಡುತ್ತಿದ್ದರು. ಮೋಡಗಳು ಕರಗಿ ನೀರಾಗಿ ಹೋಗಿದ್ದರಿಂದ ; ಆ ಶುಭ್ರವಾದ ಆಕಾಶದಲ್ಲಿ ನಕ್ಷತ್ರಗಳು, ಸಾವಿರಾರು ವರ್ಷಗಳಿಂದ ಇದನ್ನು ನಾವು ನೋಡಿರುವುದೇ ಎನ್ನುವ ರೀತಿಯಲ್ಲಿ ಮಿನುಗುತ್ತಿದ್ದವು. ಆದರೆ ನಕ್ಷತ್ರಗಳ ರೀತಿಯಲ್ಲಿ ಯಾರಿಗೂ ಹೊರೆಯಾಗದ ಆಕೆ ಈಗಲೂ ದಿನನಿತ್ಯ ಕಾಣುತ್ತಾಳೆ. ಅಥವಾ ಸಾವಿರಾರು ಜನರ ರೀತಿಯಲ್ಲಿ ಮೋರೆ ಕಳೆದುಕೊಂಡವಳಂತೆ ಅನಾಥಳಾಗಿದ್ದಾಳೆ. ಕೊನೆಗೂ ಇವರು ಉಳಿಯುವುದು ಕಾವ್ಯದ, ಕಥೆಯ, ವರದಿಯ ವಸ್ತುವಾಗಿ ಅನ್ನಿಸುತ್ತೆ.

—ಎರಡು

ಅದೊಂದು ದಿನ ಸಂಜೆ ಹಸಿವಾಗುತ್ತಿತ್ತು. ಹತ್ತಿರದಲ್ಲಿಯೇ ಇದ್ದ ಹೋಟೆಲಿಗೆ ತಿಂಡಿ ತಿನ್ನಲು ಹೋದೆ. ತಿಂಡಿ ತರಲು ಹೇಳಿ ಕೂತಿದ್ದೆ. ಹೋಟೆಲಿನ ಯಜಮಾನ ಒಬ್ಬ ಹುಡುಗನಿಗೆ ಏನೇನೋ ಹೇಳುತ್ತಿದ್ದ, ಅದರ ಬಗ್ಗೆ ಕುತೂಹಲ ಬೆಳೆಯದೇ ನನಗಾಗಿ ಬರುವ ತಿಂಡಿಗಾಗಿ ಕಾಯುತ್ತಿದ್ದೆ. ಕೆಲವು ಬಾರಿ ಹೋಟೆಲ್ಲುಗಳಲ್ಲಿ ತಿನ್ನುವುದು ಹಿಂಸೆಯ ವಿಷಯವೆನ್ನುವುದೂ ಎಲ್ಲರಿಗೂ ಗೊತ್ತಿರುವ ವಿಷಯ. ಅಲ್ಲಿಯ ದಡಪಡ ಶಬ್ದ, ಮಾಣಿಗಳು ಬೆಳಗ್ಗೆಯಿಂದ ಸಂಜೆಯ ತನಕ ದುಡಿದು ಕೈಕಾಲುಗಳಲ್ಲಿಯ ಹುಣ್ಣುಗಳು ವಾಸಿಯಾಗದೆ ಕೀವು ತುಂಬಿಕೊಂಡಿರುವುದನ್ನು ನೋಡಿದಾಗಲೆಲ್ಲಾ ಗಬಗಬನೆ ತಿಂದು ಹೊರಗೆ ಓಡಿಬರಬೇಕೆನ್ನಿಸುತ್ತೆ. ಇಂಥ ವಾತಾವರಣವನ್ನು ಪಂಚತಾರಾ ಹೋಟೆಲ್ಲುಗಳಲ್ಲಿ ಬಿಟ್ಟು ಮಿಕ್ಕೆಲ್ಲ ಕಡೆ ಕಾಣಬಹುದು. ಅದರಲ್ಲೂ ಮಾಂಸಹಾರಿ ಹೋಟೆಲ್ಲುಗಳ ಪರಿಸ್ಥಿತಿಯಂತೂ ಅಸಹ್ಯಕರವಾಗಿರುತ್ತೆ.

ತಿಂಡಿ ಬಂತು. ನೂರಾರು ಜನರ ಬಾಯಿಗೆ ಹೋಗಿಬಂದ ಚಮಚಾದಿಂದ ಬಾಯಿಗೆ ಒಂದಷ್ಟು ತಿಂಡಿಯನ್ನು ತೂರಿಸಿದೆ. ಯಾವನೋ ಒಬ್ಬ ಬಂದು ನನ್ನ ಪಕ್ಕದಲ್ಲಿ ಕೂತಿದ್ದ ಹುಡುಗನ ಕೆನ್ನೆಗೆ ಪಟಾರನೆ ಬಾರಿಸಿದ. ಅವನ ಪೆಟ್ಟಿಗೆ ತತ್ತರಿಸಿ ಹೋದ ಆ ಹುಡುಗ ಚಲಿಸದೇ ಕೂತಿದ್ದ. ಆದರೆ ಅವನ ಕಣ್ತುಂಬ ತುಂಬಿಕೊಂಡ ನೀರು ಹೊರಗೆಯೂ ಬರಲಾಗದೆ ಅವನ ಕಣ್ಣುಗುಡ್ಡೆಗಳನ್ನು ಮುಚ್ಚಿಸಿಬಿಟ್ಟಿತ್ತು. ಮತ್ತೊಬ್ಬ ತಿಂಡಿ ತಿನ್ನುತ್ತಿದ್ದವನು ಅವನ ಮುಂದೆ ಬಂದು ಕೂತು "ಏನಮ್ಮ ನನ್ನ ಬಿಲ್ಲು ಕೊಟ್ಬಿಡಮ್ಮ" ಎಂದು ಬಿಲ್ಲನ್ನು ಕೊಡಲು ಹೋಗಿ ಕೆನ್ನೆಗೆ ಬಾರಿಸಿದ. ನನಗೆ ತಿನ್ನುವುದು ಕಷ್ಟವಾಯಿತು. ವಿಷಯವೇನೆಂದು ಕೇಳಿದೆ. "ನೋಡ್ರಿ ತಿಂಡಿ ತಿಂದ್ಬಿಟ್ಟು ಬಿಲ್ಲು ಕೊಡದೆ ಓಡಿಹೋಗ್ತಿದ್ದಾನೆ" ಎಂದ ಯಜಮಾನ ತನ್ನ ಹೊಟ್ಟೆಯ ಮೇಲೆ ಕೈಯಾಡಿಸುತ್ತ.

ಆ ಹುಡುಗ ತೆಳ್ಳಗೆ, ಬೆಳ್ಳಗೆ ಎತ್ತರಕ್ಕಿದ್ದ. ಅವನ ವಯಸ್ಸು ಸುಮಾರು ಹದಿನೆಂಟಿರಬಹುದು. ಮೈಮೇಲಿನ ಬಟ್ಟೆ ನೀಟಾಗಿದ್ದವು. ಹಸಿವಿನ ಬಾದೆಗೆ ತಡೆಯಲಾರದೆ ಒಂದು ರೂಪಾಯಿ ಬೆಲೆಬಾಳುವ ತಿಂಡಿಯನ್ನು ತಿಂದಿದ್ದ. ಅದನ್ನು ಕೊಡಲಾರದೆ ನಾನಾ ರೀತಿಯ ಸುಳ್ಳುಗಳನ್ನು ಹೇಳಿ ಅಲ್ಲಿಂದ ಪರಾರಿಯಾಗಲು ಯೋಚಿಸುತ್ತಿದ್ದ. ಆದರೆ ಅಲ್ಲಿ ತಿಂಡಿ ತಿನ್ನಲು ಬಂದವರೆಲ್ಲ ಹೋಟಲ್ಲಿನ ಯಜಮಾನನನ್ನು ಮೆಚ್ಚಿಸಲೊ ಅಥವಾ ತಮ್ಮ ನೈತಿಕ ಪ್ರಜ್ಞೆ ತುಂಬ ಗಾಢವಾದದ್ದು ಎಂಬುದನ್ನು ತೋರಿಸಿಕೊಳ್ಳುವ ಕಾತರತೆಯಿಂದಲೋ ; ಆ ಹುಡುಗನನ್ನು ಬೈದೋ, ಒಂದೆರಡೇಟು ಬಾರಿಸಿಯೋ ತಮ್ಮ ಪ್ರಾಮಾಣಿಕತೆಗೆ ಪ್ರಮಾಣ ಪತ್ರಗಳನ್ನು ಪಡೆದು ತೃಪ್ತಿಯಿಂದ ಹೋಗುತ್ತಿದ್ದರು,

ಸುಮಾರು ಅರ್ಧಗಂಟೆಯಲ್ಲಿಯ ಈ ಹಿಂಸೆಯಲ್ಲಿ ಮನಸ್ಸಿಗೆ ಪಿಚ್ಚೆನಿಸಿ, ಅವನ ಬಿಲ್ಲಿನ ಬಾಬ್ತು ಒಂದು ರೂಪಾಯಿಯನ್ನು ಕೊಡಲು ಹೋದೆ. ಆ ಹುಡುಗನ ಕಣ್ಣಲ್ಲಿ ತಾನು ಬಚಾವು ಆದೆನಲ್ಲ ಎಂಬ ಆಸೆ ಕಾಣಿಸಿಕೊಳ್ಳುವ ಸಮಯಕ್ಕೆ ಸುತ್ತಲಿನವರ ಕ್ರೂರದೃಷ್ಟಿಯಿಂದ ಅಲ್ಲಿಯೇ ಬತ್ತಿಹೋಯಿತು. ಕೆಲವರು "ಏನಯ್ಯ ನೀನೇನಾ ದುಡ್ಡು ಕಂಡಿರೋನು ? ನಮ್ಮ ಹತ್ತಿರವೇನು ದುಡ್ಡಿಲ್ಲವಾ ? ನಿನ್ನ ಪುಟಗೋಸಿ ಮೇಲಿನ ದುಡ್ಡಲ್ಲಯ್ಯ ಮುಖ್ಯ" ಎಂದ. ಮತ್ತೊಬ್ಬ "ಮೊದಲು ಇಂಥ ನನ್ಮಕ್ಕಳಿಗೆ ಎರಡು ಬಿಡಬೇಕು" ಎಂದ. ನನಗೆ ಸಹಿಸಿಕೊಳ್ಳಲಾಗದೆ, ಅವನತ್ತ ದೃಷ್ಟಿಹರಿಸಿದೆ. "ಏನೋ ಹಾಗೆ ನೋಡ್ತೀಯ, ಬಂದ್ಬಿಟ್ಟ ಲವಡಾಕೆಬಾಲ್ ಬಿಟ್ಟುಕೊಂಡು" ಎಂದ. ಮಗದೊಬ್ಬ, ನನ್ನ ಹತ್ತಿರ ಬಂದು "ಏನಮ್ಮ ಅವನು ನಿನ್ನ ಫ್ರೆಂಡಾ" ಎಂದು ಬುಜದ ಮೇಲೆ ಕೈಹಾಕಿದ, ಅವನ ಕೈಯನ್ನು ಕೆಳಕ್ಕೆ ಕೊಡವಿದೆ. "ಪರವಾಗಿಲ್ಲ ಗರಿಡೀಗೆ ಹೋಗಿ ಬಂದಂಗೆ ಕಾಣ್ತದೆ." ಎಂದು ಅವನು ನನಗೆ ಬಾರಿಸಲು ಸಿದ್ಧವಾಗುವ ಹೊತ್ತಿಗೆ; ಹಿಂದಿನಿಂದ "ನೀನ್ಯಾಕೋ ಇಲ್ಲಿ ಸಾಯ್ತಿದ್ದೀಯ ?" ಎಂದು ಹೆಗಲನ್ನು ಅಲುಗಿಸಿದಾಗ ಹಿಂದಿರುಗಿ ನೋಡಿದೆ. ಅವನು ನನ್ನ ಗೆಳೆಯನಿದ್ದ. ಸ್ವಲ್ಪ ಧೈರ್ಯ ಬಂತು, ಆ ರಾಕ್ಷಸನ ಜೊತೆ ಕಾದಾಡಲು. ಆದರೆ ಅವನು "ಯಾವ ನನ್ಮಕ್ಕಳು ಎಲ್ಲಿಯಾದರೂ ಸಾಯಲಿ ಬಾರಯ್ಯ" ಎಂದು ನನ್ನ ಬಿಲ್ಲನ್ನು ತೆತ್ತು ಹೊರಗೆಳೆದುಕೊಂಡು ಬಂದ. ಹೊರಗೆ ರಸ್ತೆಯ ಗದ್ದಲದಲ್ಲಿ ನನ್ನನ್ನು ಕಳೆದುಕೊಂಡಾಗ ಮನಸ್ಸಿಗೆ ಪಿಚ್ಚೆನಿಸಿತು; ಆ ಹುಡುಗನನ್ನು ಕ್ರೂರಿಗಳ ಕೈಗೆ ಕೊಟ್ಟು ಬಂದಿದ್ದಕ್ಕೆ.

2-8-83 ಶೂದ್ರ ಶ್ರೀನಿವಾಸ್

## ಸುತ್ತ ಮುತ್ತ

### ಯೂಸುಫ್‌ರವರ ವೈವಿಧ್ಯಮಯ ಚಿತ್ರಗಳು

ಮೂವತ್ತೊಂಬತ್ತು ವರ್ಷದ ಯೂಸುಫ್ ತೆಳ್ಳಗೆ, ಬೆಳ್ಳಗೆ ಎತ್ತರಕ್ಕಿರುವ ವ್ಯಕ್ತಿ. ಕಳೆದ ನಾಲ್ಕೈದು ವರ್ಷಗಳಿಂದ ಬಣ್ಣಗಳೊಡನೆ 'ತನ್ನ ಪ್ರೀತಿ'ಯನ್ನು ಕಂಡುಕೊಂಡು ಹೊರಹಾಕಿದ ಒಂದಷ್ಟು ಚಿತ್ರಗಳನ್ನು ನೋಡುವಾಗಲೆಲ್ಲ; ಈಲ್ಲ ಕುಂಚವನ್ನು ಲೀಲಾಜಾಲವಾಗಿ 'ಕ್ಯಾನ್‌ವಾಸಿ'ನ ಮೇಲೆ ಹರಿದಾಡಿಸಬಲ್ಲ ಎಂದುಕೊಂಡೆ.

1983ರ ರಾಷ್ಟ್ರೀಯ ಪ್ರಶಸ್ತಿಗೆ ಪಾತ್ರನಾದ ಕನ್ನಡಿಗ ಯೂಸುಫ್, ಕೇರಳದಿಂದ ಬಡಪಾಯಿಯಾಗಿ ಓಡಿಬಂದವನು. ಕನ್ನಡವನ್ನು ಚೆನ್ನಾಗಿ ಓದಿ–ಬರೆಯಬಲ್ಲ ಈ ಕಲಾವಿದ ಎಲ್ಲರೊಡನೆಯೂ ಆತ್ಮೀಯವಾಗಿ ಕರಗಿಹೋಗಬಹುದಾದ ವ್ಯಕ್ತಿತ್ವವುಳ್ಳವನು. ಆದರೆ ಅದೇ ಸಮಯದಲ್ಲಿ ಬಣ್ಣಗಳಲ್ಲಿ ಹೃದಯವನ್ನು ಮತ್ತು ಮನಸ್ಸನ್ನು ತೋಡಿಕೊಳ್ಳುವ ಸಾಮರ್ಥ್ಯವನ್ನು ಹೊಂದಿರುವ ಯೂಸುಫ್‌ನ ಬಹುಪಾಲು ಚಿತ್ರಗಳು ವಿಷಾದದ ಚೌಕಟ್ಟಿನಲ್ಲಿ ಬೆಳೆದಂಥವು. ಇದಕ್ಕೆ ಮುಖ್ಯವಾಗಿ ಯೂಸುಫ್‌ನಂಥ ಕಲಾವಿದ ಬೆಳೆದುಬಂದಂತಹ ಮತ್ತು ಇರುವಂತಹ ಪರಿಸರವೇ ವಿಷಾದದ ಧ್ವನಿಯನ್ನು ತುಂಬಿಕೊಂಡಿರುವುದರಿಂದ ಬೇರೆ ಏನನ್ನು ಚಿತ್ರಿಸಲು ಸಾಧ್ಯ ? ಆದ್ದರಿಂದ ಎಲ್ಲಾ ಕಾಲದ ಕಲಾವಿದರು ತಮ್ಮ ಕಲೆಯಲ್ಲಿ 'ವ್ಯಥೆ ಮತ್ತು ಲವಲವಿಕೆ'ಯನ್ನು ಮೂಲ ದ್ರವ್ಯವನ್ನಾಗಿಸಿಕೊಂಡು ನಿಲ್ಲತಕ್ಕಂತಹವರು. ಇದು ಕಲೆಯ ಎಲ್ಲಾ ಪ್ರಕಾರಗಳಲ್ಲೂ ನಡೆಯತಕ್ಕಂತಹ ಕೆಲಸವಾದ್ದರಿಂದ; ಪರಿಸರದ ವೈರುಧ್ಯಗಳನ್ನು ಜೀರ್ಣಿಸಿಕೊಳ್ಳುವ ಗಟ್ಟಿತನವನ್ನು ಪಡೆಯಬೇಕಾಗುತ್ತೆ.

ಬೆಂಗಳೂರಿನ ವಿಮಾನ ಕಾರ್ಖಾನೆಯಲ್ಲಿ ಯಂತ್ರಗಳ ನಡುವೆ ಕೆಲಸಮಾಡುವ ಯೂಸುಫ್ ಬಣ್ಣಗಳಲ್ಲಿ ಏಕಾಗ್ರತೆಯನ್ನು ಕಂಡುಕೊಳ್ಳಲು ತವಕಿಸುತ್ತಿರುವ ಕಲಾವಿದ.

ಬೆಂಗಳೂರಿನ ಅರಮನೆಯಂಥ 'ಚಿತ್ರಕಲಾ ಪರಿಷತ್ತಿ'ನ ಆರ್ಟ್‌ಗ್ಯಾಲರಿಯಲ್ಲಿ (ಇಲ್ಲಿನ ಆರ್ಟ್‌ಗ್ಯಾಲರಿಯ ಭವನ ಪೂರ್ಣವಾದಾಗ ಬೆಂಗಳೂರಿನಲ್ಲಿ ನೋಡಬಹುದಾದ ಬಹುಮುಖ್ಯ ಕಲಾಕ್ಷೇತ್ರವಾಗಬಹುದು) ಆಗಸ್ಟ್ ಎರಡರಂದು ಯೂಸುಫ್‌ರವರ ಚಿತ್ರಗಳ ಪ್ರದರ್ಶನದ ಉದ್ಘಾಟನೆಯ ನಂತರ ಹೋದಾಗ ನಗುತ್ತ ನಿಂತಿದ್ದರಿಂದ

ಬಿಡುಗಡೆಯಾಗಿ ಅವರ ಚಿತ್ರಗಳಲ್ಲಿ ಅವರನ್ನು ಕಂಡುಕೊಳ್ಳಲು ತೊಡಗಿದಾಗ ಬಹಳಷ್ಟು ಚಿತ್ರಗಳು ಸೆರೆಹಿಡಿದವು.

ಪ್ರದರ್ಶನದ ಮೊದಲನೋಟಕ್ಕೆ ಕ್ಯಾನವಾಸಿನ ಮೇಲೆ ತುಂಬ ಸರಳವಾಗಿ ಕಾಣುವ ಕಾಗದದ ಚಿತ್ರಗಳು ಒಂದು ರೀತಿಯ ಸಾಮೀಪ್ಯವನ್ನು ಬೆಳಸಿಕೊಂಡತೆಲ್ಲಾ ಮುದ್ದಾಗಿ ಕಂಡ ಚಿತ್ರಗಳು. ಬಿಳಿಯ ಕಾಗದದಲ್ಲಿ ತನ್ನೆಲ್ಲ ಅಂಕುಡೊಂಕುಗಳಿಂದ ಮನುಷ್ಯನ ಭಾವನೆಗಳನ್ನ ತನ್ನ ಮುಖಭಾವದಲ್ಲಿ ತೋರಿಸಲು ಸಾಧ್ಯ ಎಂಬುದನ್ನು ಯೂಸುಫ್ ಸಮರ್ಥವಾಗಿ ಕೈಯಾಡಿಸಿದ್ದಾರೆ. ನಾವು ಯಾವುದಕ್ಕೆ ಒಟ್ಟಾರೆ ಭಾವನೆ ಗಳನ್ನು ವ್ಯಕ್ತಪಡಿಸಲು, ಮುಖದ ಮೇಲಿನ, ಅಥವಾ ಆಕೃತಿಯ ಮುಖ ಬಣ್ಣಗಳನ್ನು ಬಯಸುತ್ತದೆ ಎಂಬುದನ್ನು ಈ ಚಿತ್ರಗಳನ್ನು ನೋಡಿದಾಗ ಸುಳ್ಳಾಗಿಸಿದೆ ಅನ್ನಿಸಿತು. ಒಟ್ಟು ಭಾವನೆಗಳನ್ನು ಬಣ್ಣಗಳಲ್ಲದಿದ್ದರೂ; ಒಂದು ಮಿತಿಯೊಳಗೆ ಸಮರ್ಥವಾಗಿ ನೀಡಬಲ್ಲಂಥವು. ಇವುಗಳಲ್ಲಿ ಯೋಗಿಯ ಚಿತ್ರಣ, ಇಬ್ಬರು ಸುಂದರಿಯರ ಚಿತ್ರಣ ಹಾಗೂ ವನದೊಳಗಿನ ಹುಡುಗಿಯ ಚಿತ್ರಣ ಎದ್ದು ಕಾಣುತ್ತಿದ್ದವು.

ಕ್ಯಾನವಾಸಿನ ಮೇಲೆ ಬಣ್ಣಗಳಲ್ಲಿ ವಿಸ್ತಾರವನ್ನು ಕೊಟ್ಟ ಒಟ್ಟು ಇಪ್ಪತ್ತೆರಡು ಚಿತ್ರಗಳಲ್ಲಿ ಕೆಲವು ವ್ಯಕ್ತಿ ಚಿತ್ರಗಳು, ಕೆಲವು ನಗ್ನ ಚಿತ್ರಗಳು ಹಾಗೂ ಕೆಲವು ದುರಂತ ದಲ್ಲಿ ಕುಗ್ಗಿಹೋದ ಚಿತ್ರಗಳು. ಇವುಗಳಲ್ಲಿ ಎರಡು ನಗ್ನ ಚಿತ್ರಗಳು, ಮಲಗಿರುವ ತಾಯಿಯ ಮೊಲೆ ಚೀಪುತ್ತಿರುವ ಚಿತ್ರಣ, ಮುನಿಯಮ್ಮ ಹಾಗೂ ಚಿನ್ನಮ್ಮನ ಪೂರ್ಣ ಪ್ರಮಾಣದ ಚಿತ್ರಗಳು ಮತ್ತು ಹಳೆಯ ಗೋಡೆಯಲ್ಲಿ ಕಾಣಿಸಿಕೊಳ್ಳುವ ವ್ಯಕ್ತಿಚಿತ್ರಣ ಅರ್ಥಪೂರ್ಣವಾದಂತಹವು. ಹಾಗೆಯೇ ಅಮ್ಮುವಿನ ಚಿತ್ರಣ. ಇಡೀ ಪ್ರದರ್ಶನ ದಲ್ಲಿ ತುಂಬ ಅರ್ಥಪೂರ್ಣವಾಗಿ ಒಟ್ಟು ಕ್ಯಾನವಾಸಿಗೆ ಮೆರಗು ಕೊಡುತ್ತಿದ್ದ ಚಿತ್ರಣ ವೆಂದರೆ, ಬೀದಿಯಲ್ಲಿ ಸತ್ತ ಮಂದಿಗೆ ಶ್ರದ್ಧಾಂಜಲಿಯನ್ನು ಅರ್ಪಿಸುವ ಚಿತ್ರ. ಬಣ್ಣಗಳ ಶ್ರೀಮಂತಿಕೆಯನ್ನು ಮೀರಿ ತುಂಬ ಸಮತೋಲನದಲ್ಲಿ ಒಂದಷ್ಟು ಬೀದಿಯಲ್ಲಿ ಸತ್ತವರ ಮೇಲೆ, ರಾಷ್ಟ್ರೀಯ ಧ್ವಜವನ್ನು ಹೊದಿಸಿರುವುದು. ಇದು ವಿಡಂಬನೆಯಾಗಿಯೂ ಮಾರ್ಮಿಕವಾಗಿರುವುದು ಇದರ ಹೆಚ್ಚುಗಾರಿಕೆ.

ಯೂಸುಫ್‌ರವರ ಬಹಳಷ್ಟು ಚಿತ್ರಗಳು ಗಂಭೀರವಾದ ವಿವರಣೆಯನ್ನು ಬಯಸುತ್ತವೆ.

**ಶಾಂತಿನಾಥದೇಸಾಯಿ**

ಶಾಂತಿನಾಥದೇಸಾಯಿಯವರು ನವ್ಯದ ಸಂದರ್ಭದಲ್ಲಿ ಬಂದ ಬಹುಮುಖ್ಯ ಕೆಲವೇ ಕಾದಂಬರಿಕಾರರಲ್ಲಿ ಒಬ್ಬರು. ತಮ್ಮ ಕಾದಂಬರಿಗಳಿಂದ, ಸಣ್ಣಕಥೆಗಳಿಂದ

ಮತ್ತು ವಿಮರ್ಶೆಯಿಂದ ಕನ್ನಡದಲ್ಲಿ ಗಂಭೀರಸ್ಥಾನವನ್ನು ಗಳಿಸಿದರು. ಇವರ ಬಗ್ಗೆ 'ಶೂದ್ರ' ಜುಲೈ 31ರಂದು ನಡೆಸಿದ ಅರ್ಥಪೂರ್ಣ ಚರ್ಚೆಯಲ್ಲಿ ರಾಮಚಂದ್ರದೇವ, ಮುತಾಲಿಕ್, ಬಸವರಾಜ ಕಲ್ಗುಡಿ, ಕಿ. ರಂ. ನಾಗರಾಜ, ಡಿ. ಆರ್. ನಾಗರಾಜ್, ನಾಗರಾಜಪ್ಪ, ವಾಘ್, ಸತ್ಯನಾರಾಯಣ, ಎಂ. ಜಿ. ನಾಯಕ್ ಹಾಗೂ ರಾಜೇಶ್ವರಿ ಮತ್ತು ಚಂಪಾವತಿ ಭಾಗವಹಿಸಿದ್ದರು. ಇದನ್ನು ಕೆ. ವಿ. ನಾರಾಯಣ ಅವರು ನಡೆಸಿಕೊಟ್ಟರು. ನಂತರ ಅನಂತಮೂರ್ತಿಯವರ ಅಧ್ಯಕ್ಷತೆಯಲ್ಲಿ ಮರಾಠಿಯ ಪ್ರಸಿದ್ಧ ಕಾದಂಬರಿಕಾರರಾದ ಬಾಲಚಂದ್ರನೇಮಾಡೆ ಹಾಗೂ ಶಾಂತಿನಾಥದೇಸಾಯಿ ಮಾತಾಡಿದರು, ಈ ಕಾರ್ಯಕ್ರಮದಲ್ಲಿ ಭಾಗವಹಿಸಿದ ಎಲ್ಲರಿಗೂ ಶೂದ್ರ ಕೃತಜ್ಞತೆಗಳನ್ನು ಸೂಚಿಸುತ್ತೆ.

## ಗೋವಿಂದಪೈ

ದಿವಂಗತ ಗೋವಿಂದಪೈರವರ ಕಾವ್ಯ ಕುರಿತು 'ಕಾವ್ಯಮಂಡಳ'ದ ಕಾರ್ಯಕ್ರಮದಲ್ಲಿ ಕೆ. ವಿ. ನಾರಾಯಣರವರು ಪ್ರಬಂಧ ಮಂಡಿಸಿದರು. ಇದಕ್ಕಿಂತ ಮುಂಚೆ ಗೋವಿಂದಪೈರವರ ಕಾವ್ಯದ ಬಗ್ಗೆ ಅಭಿಮಾನ ಬರುವಂತೆ ಓದಿದವರು : ಕ. ವೆಂ. ರಾಜಗೋಪಾಲ, ಕಿ. ರಂ. ನಾಗರಾಜ, ರಾಘವೇಂದ್ರರಾವ್ ಹಾಗೂ ಸುಮತೀಂದ್ರ ನಾಡಿಗ್. ಸತ್ಯನಾರಾಯಣ ಅವರ ನಿರ್ವಹಣೆಯಲ್ಲಿ ರಾಮಚಂದ್ರಶರ್ಮ, ವಿಜಯಾ ಮುಂತಾದವರು ಭಾಗವಹಿಸಿದ್ದರು. ಈ ಕಾರ್ಯಕ್ರಮದ ಮತ್ತೊಂದು ವೈಶಿಷ್ಟ್ಯವೆಂದರೆ: ನಿವೃತ್ತ ಅಧಿಕಾರಿಯೊಬ್ಬರು ಮೊಮ್ಮಗನ ಹುಟ್ಟಿದಹಬ್ಬಕ್ಕೆ ಬರೆದ, ಗೆಳೆಯನ ಸಾವಿಗೆ ಬರೆದ ಪದ್ಯಗಳನ್ನು ಕೆ. ವಿ. ನಾರಾಯಣ ಅವರಂಥ ಸಂಕೋಚದ ವ್ಯಕ್ತಿಯ ಬೆನ್ನು ಹತ್ತಿ ಓವತೊಡಗಿದ್ದು. ಅವರಿಂದ ಬಿಡಿಸಬೇಕಾದರೆ ನಿಜವಾಗಿಯೂ ಕಷ್ಟದ ವಿಷಯವಾಗಿತ್ತು. ಕೆ. ವಿ. ನಾರಾಯಣರವರ ಮನೆಯ ವಿಳಾಸವನ್ನು ಅವರು ತೆಗೆದುಕೊಂಡಿರುವುದರಿಂದ; ಅಷ್ಟು ಜಾಗ್ರತೆ ಕೆ. ವಿ. ಎನ್. ಅವರು ಬಿಡುಗಡೆಯಾಗಲಾರರು ಅನ್ನಿಸುತ್ತೆ.

## ಚೆರಬಂಡರಾಜು

ಪ್ರಸಿದ್ಧ ತೆಲುಗು ಕ್ರಾಂತಿಕಾರಿ ಸಾಹಿತಿ ಚೆರಬಂಡರಾಜುರವರಿಗೆ ಶ್ರದ್ಧಾಂಜಲಿಯನ್ನು ಅರ್ಪಿಸಲು ಬೆಂಗಳೂರಿನ ಪ್ರಗತಿಪರ ಚಿಂತಕರ ವೇದಿಕೆಯು, ಚೆರಬಂಡರಾಜುರವರ ವ್ಯಕ್ತಿತ್ವ ಮತ್ತು ಸಾಹಿತ್ಯದ ಬಗ್ಗೆ ಚರ್ಚೆಯನ್ನು ಏರ್ಪಡಿಸಿತ್ತು, ಇದರಲ್ಲಿ ದೇವನೂರು ಮಹಾದೇವ, ಕುಂ. ವೀರಭದ್ರಪ್ಪ, ಡಿ. ಆರ್. ನಾಗರಾಜ್, ಸಿದ್ಧ

ಲಿಂಗಯ್ಯ, ಬರಗೂರು ರಾಮಚಂದ್ರಪ್ಪ ಮತ್ತು ಎಚ್. ಎಸ್. ಶಿವಪ್ರಕಾಶ್ ಭಾಗ ವಹಿಸಿದ್ದರು. ಇದಲ್ಲದೆ ತೆಲುಗಿನ ಕ್ರಾಂತಿಕಾರಿ ಕವಿ ರಮಣಾರೆಡ್ಡಿ ಭಾಗವಹಿಸಿದ್ದರು. ಸಂಜೆ ಹೊರಡುವ ತರಾತುರಿಯಲ್ಲಿದ್ದಾಗ, ರಮಣಾರೆಡ್ಡಿಯನ್ನು ಭೇಟಿಯಾದೆ. ಅವರ ಜೊತೆಯಲ್ಲಿ ಬಾಬಯ್ಯ ಎಂಬ ಕ್ರಾಂತಿಕಾರಿಯಿದ್ದ. ಪರಿಚಯದ ಸಮಯದಲ್ಲಿ 'ಶೂದ್ರ' ಪತ್ರಿಕೆಯ ವಿಷಯ ಬಂದಾಗ; ಶೂದ್ರದ ಹೆಸರು ಅವರಿಗೆ ಅಪರಾಧವಾಗಿ ಕಂಡಿತು. ಬಾಬಯ್ಯ ಹಸನ್ಮುಖಿಯಾಗಿ ನೋಡುತ್ತಿದ್ದರು.

**ಕಲಾಕ್ಷೇತ್ರ**

ಕಲಾಕ್ಷೇತ್ರದ ತಲೆಯನ್ನು ಕಿತ್ತು ಬೇರೆಯ ತಲೆಯನ್ನು ಜೋಡಿಸುತ್ತಿರುವುದ ರಿಂದ ರಂಗಭೂಮಿಯ ಗೆಳೆಯರು ನಿಲ್ಲಲು ನೆಲೆಯಿಲ್ಲದೆ ಅಲೆಯುತ್ತಿದ್ದಾರೆ. ಕಲಾ ಕ್ಷೇತ್ರಕ್ಕೆ ತಲೆ ಈಗಾಗಲೇ ಬರುವ ಸೂಚನೆಗಳಿಲ್ಲ. ಯಾಕೆಂದರೆ ಜನತಾ ಸರ್ಕಾರ ದವರು ನಿಧಾನಗತಿಗೆ ನಿಸ್ಸೀಮರು. ಆದ್ದರಿಂದ ಕನ್ನಡ ರಂಗಭೂಮಿಯ ಗೆಳೆಯರ ಗೋಳನ್ನು ನೋಡಲಾರದೆ, ಕಪ್ಪಣ್ಣ ಕಲಾಕ್ಷೇತ್ರದ ಹಿಂದೆ ಷಡ್ಡಿಗೆ ಯೋಜನೆ ಹಾಕಿ ದ್ದಾರೆ. ಆ ಷಡ್ಡು ಜಾಗ್ರತೆ ತಲೆಯೆತ್ತಲು ಕಪ್ಪಣ್ಣ ತಮ್ಮ ಮಾಮೂಲಿ ಕ್ರಿಯಾ ಶೀಲತೆಗೆ ಒಂದಷ್ಟು ಹೆಚ್ಚು ಟಾನಿಕ್ಕನ್ನು ಸೇವಿಸಲಿ ಎಂದು ಶೂದ್ರ ಆಶಿಸುತ್ತೆ.

**ಕಲಾಮೇಳ**

ಎರಡುಬಾರಿ 'ಕಲಾಮೇಳ'ವನ್ನು ಅರ್ಥಪೂರ್ಣವಾದ ದಿಕ್ಕಿನಲ್ಲಿ ನಡೆಸಿಕೊಂಡು ಬಂದ ಗೆಳೆಯರು ಮತ್ತೆ ಈ ವರ್ಷದ ನವೆಂಬರ್ ತಿಂಗಳಲ್ಲಿ ಹೆಚ್ಚು ಆಕರ್ಷಕವಾಗಿ ನಡೆಸುವ ಯೋಜನೆ ಹಾಕಿಕೊಂಡಿದ್ದಾರೆ. ಯಾವುದಕ್ಕೂ ದುಡ್ಡಿನ ಅಗತ್ಯವಿರುವುದ ರಿಂದ ಶೂದ್ರದ ಅಭಿಮಾನಿಗಳು ತಮ್ಮ ಕೈಲಾದಮಟ್ಟಿನ ಸಹಾಯವನ್ನು ಮಾಡಲಿ ಎಂದು ಕೇಳಿಕೊಳ್ಳುತ್ತೆ. 'ಕಲಾಮೇಳ' ಒಂದಷ್ಟು ಕ್ರಿಯಾಶೀಲ ಕಲಾವಿದರು ಮತ್ತು ಬರಹಗಾರರು ಕೂಡಿಕೊಂಡು ನಡೆಸುತ್ತಿರುವ ಕಾರ್ಯಕ್ರಮ. ಮುಂದಿನ ಸಂಚಿಕೆಯಲ್ಲಿ ವಿಳಾಸವನ್ನು ಕೊಡಲಾಗುವುದು. ●

ಓದಿ : **'ಅಮೃತ ಮತ್ತು ಗರುಡ'**

—ಡಾ॥ ಡಿ. ಆರ್. ನಾಗರಾಜ್

**'ನೂರು ಮರ ನೂರು ಸ್ವರ'**

—ಎಚ್. ಎಸ್ ವೆಂಕಟೇಶಮೂರ್ತಿ

**"ಜನಹಿತ ಸಾಧನೆಯಲ್ಲಿ ಅರ್ಥಪೂರ್ಣ ಕಾರ್ಯಗಳ ಆರು ತಿಂಗಳು"**

**ಕಳೆದ ನೂರೆಂಭತ್ತು ದಿನಗಳಲ್ಲಿ ಸರ್ಕಾರ ಇಟ್ಟ ದಿಟ್ಟ ಹೆಜ್ಜೆ : ತಳೆದ ನಿಲುವು ಅಚಲ. ಕೈಗೊಂಡ ಕಾರ್ಯವನ್ನು ಆಗು ಮಾಡುವ ವಿಶ್ವಾಸ.**

* ಯೋಜನಾ ವೆಚ್ಚದಲ್ಲಿ ಈ ವರ್ಷ ನೂರು ಕೋಟಿ ರೂ. ಹೆಚ್ಚಳ.
* ಅಭಾವ ಪರಿಹಾರ ಕಾರ್ಯಗಳಿಗೆ ಈವರೆಗೆ 50 ಕೋಟಿ ರೂ ವೆಚ್ಚ.
* ರೈತರು ಹಾಗೂ ಗ್ರಾಹಕರಿಗೆ ನೀಡಿರುವ ರಿಯಾಯಿತಿ—ಸುಮಾರು 50 ಕೋಟಿ ರೂ.

**ಕುಡಿಯಲು ನೀರು ; ಕೃಷಿಗೆ ನೀರಾವರಿ :**

ಕುಡಿಯುವ ನೀರಿನ ತೀವ್ರ ಅಭಾವವಿರುವ ಗ್ರಾಮಾಂತರ ಪ್ರದೇಶದಲ್ಲಿ 25 ಕೋಟಿ ರೂ ವೆಚ್ಚದಲ್ಲಿ 12, 800 ಕೊಳವೆ ಬಾವಿಗಳ ಸೌಕರ್ಯ. ಎಲ್ಲ ಹಳ್ಳಿಗೂ ನೀರು ಪೂರೈಕೆಗಾಗಿ 100 ಕೋಟಿ ರೂ. ಯೋಜನೆ.

ಹಳೆ ನೀರಾವರಿ ಯೋಜನೆಗಳಿಗೆ ವಿಶೇಷ ಗಮನ. ದೊಡ್ಡ ಮತ್ತು ಮಧ್ಯಮ ನೀರಾವರಿಗೆ 89 ಕೋಟಿ ರೂ. 15 ಕೋಟಿ ರೂ. ವೆಚ್ಚದಲ್ಲಿ 400 ಹೊಸ ಕೆರೆಗಳ ನಿರ್ಮಾಣ.

**ರೈತರಿಗೆ ರಿಯಾಯಿತಿ :** ರೈತರಿಗೆ ಸುಮಾರು 36ಕೋಟಿ ರೂಪಾಯಿಗಳಷ್ಟು ವಿವಿಧ ರೀತಿಯ ಪರಿಹಾರಗಳು.

**ಅಭಾವ ಪರಿಹಾರ ಕಾರ್ಯ :** 50 ಕೋಟಿ ರೂ ವೆಚ್ಚ. ಕೃಷಿ ಕಾರ್ಮಿಕರು, ರಸ್ತೆ, ಮುಂತಾದ ಕಾಮಗಾರಿ ಕೆಲಸಗಾರರ ಕೂಲಿ ದರದಲ್ಲಿ ರೂ. 5ರಿಂದ 6-50ಕ್ಕೆ ಹೆಚ್ಚಳ.

**ಹಿಂದುಳಿದ ವರ್ಗಗಳ ಆಯೋಗ :** ಹಿಂದುಳಿದ ವರ್ಗಗಳ ಹಿತರಕ್ಷಣೆಗೆ ನೇಮಕವಾದ ದ್ವಿತೀಯ ಹಿಂದುಳಿದ ವರ್ಗಗಳ ಆಯೋಗ ಹಾಗೂ ಅಲ್ಪ ಸಂಖ್ಯಾತರ ಸಮಸ್ಯೆ ಪರಿಶೀಲನೆಗೆ ರಚಿತವಾಗಿರುವ ಅಲ್ಪಸಂಖ್ಯಾತರ ಆಯೋಗ ಗಳ ಕಾರ್ಯಾರಂಭ.

**ಶಿಕ್ಷಣ :** ಶಿಕ್ಷಣ ಕ್ಷೇತ್ರದ ಸಮಗ್ರ ಸುಧಾರಣೆಗೆ ಸಾಧ್ಯವಾಗುವ ಶಿಕ್ಷಣ ವಿಧೇಯಕಕ್ಕೆ ಸಿದ್ಧತೆ. ರಾಜ್ಯದ ವಿದ್ಯಾರ್ಥಿಗಳಿಗೆ ನಿಗದಿಪಡಿಸಿದ ಮೆಡಿಕಲ್ ಸೀಟುಗಳಿಗೆ ಸೀಟು ಶುಲ್ಕ ರದ್ದು. ಸರ್ಕಾರಿ ಸೇವೆಯಲ್ಲಿರುವ ಸ್ಥಳೀಯ ಹಾಗೂ ಸ್ವೈಪೆಂಡರಿ ಪದವೀಧರರೂ ಹಾಗೂ ಇತರ ಅಭ್ಯರ್ಥಿಗಳಿಗೆ ಸರ್ಕಾರಿ ಸೇವೆಗೆ ಸೇರಲು ಗರಿಷ್ಠ ವಯೋಮಿತಿ ಏರಿಕೆ.

**ಆಡಳಿತದಲ್ಲಿ ಕನ್ನಡ :** ಆಡಳಿತದಲ್ಲಿ ಕನ್ನಡ ಬಳಕೆ ಕಡ್ಡಾಯ. ಕನ್ನಡ ಬಳಕೆ ಆಗುತ್ತಿದೆಯೇ ಎಂಬುದನ್ನು ಪರಿಶೀಲಿಸಿ, ಸಮಸ್ಯೆಗಳಿದ್ದರೆ ಸಲಹೆ ಸೂಚಿಸಲು ಕಾವಲು ಸಮಿತಿ.

ಪ್ರಕಟಣೆ: ವಾರ್ತಾ ಮತ್ತು ಪ್ರಚಾರ ಇಲಾಖೆ ಕರ್ನಾಟಕ ಸರ್ಕಾರ ಬೆಂಗಳೂರು

ಈಗ ಪ್ರಕಟವಾಗಿವೆ

ಗೋಪಾಲಕೃಷ್ಣ ಅಡಿಗರ

**ಲೇಖನಗಳು ಮತ್ತು ಮುನ್ನುಡಿಗಳು**

ಬೆಲೆ: ರೂಪಾಯಿ ಹದಿನೈದು

ಎಸ್. ವೆಂಕಟರಾಮ್ ಅವರ

**ದುಡಿಯುವವರ ದನಿ ಮತ್ತು ಇತರ ಲೇಖನಗಳು**

ಬೆಲೆ: ರೂಪಾಯಿ ಹದಿನಾರು

ಡಾ|| ಕೆ. ಮರುಳಸಿದ್ದಪ್ಪ ಅವರ

**ಆಧುನಿಕ ಕನ್ನಡ ನಾಟಕ**

ಬೆಲೆ: ನಲವತ್ತು ರೂಪಾಯಿ

ಷರ್ಲಾಕ್ ಹೋಮ್ಸ್‌ನ

**ನಾಲ್ವರ ಸಂಕೇತ**

ಮೂಲ: ಸರ್ ಕಾನನ್ ಆರ್ಥರ್ ಡಾಯ್ಲ್. ಅನು: ವಾಸುದೇವರಾವ್

ಬೆಲೆ: ಹತ್ತು ರೂಪಾಯಿ

**ಸಾವು ಮತ್ತು ಇತರ ಕಥೆಗಳು—ಬಿ. ಸಿ. ದೇಸಾಯಿ**

ಬೆಲೆ: ಒಂಭತ್ತು ರೂಪಾಯಿ

ಪ್ರಕಾಶಕರು:

**ಪ್ರಿಂಟರ್ಸ್ ಪ್ರಕಾಶನ**

75, ಮಹಾತ್ಮಗಾಂಧಿ ರಸ್ತೆ

ಬೆಂಗಳೂರು–560 001

ಮಾಲೀಕರು

ದಿ ಪ್ರಿಂಟರ್ಸ್ (ಮೈಸೂರು) ಲಿಮಿಟೆಡ್

ಬೆಂಗಳೂರು-560 001

L/N/P/KRNU/72

No. M (2) PRB 211/73-74

ಮುಂದಿನ ಸಂಚಿಕೆಯಲ್ಲಿ

ಜಾರ್ಜ್ ತಾಮ್ಸನ್

ಸುಮತೀಂದ್ರ ನಾಡಿಗ್

ಸಾ. ಉಷಾ

ಗಂಗಾಧರಮೂರ್ತಿ

ಎಚ್. ಎಸ್. ಶಿವಪ್ರಕಾಶ್

ಬಿ. ಟಿ. ಲಲಿತಾನಾಯಕ್

ಸೂರ್ಯಕಾಂತ್

ರಜನಿಕಾಂತ್

ರಾಮಚಂದ್ರದೇವ

ಬಸವರಾಜ ಕಲ್ಗುಡಿ

ಪಿ. ಆರ್. ಮುತಾಲಿಕ್

ಕನಸಿಗೊಂದು ಕಣ್ಣು

ಇತ್ಯಾದಿ.



ನನ್ನ ಈ ಚಿತ್ರವನ್ನು ಮತ್ತೆ ಮತ್ತೆ ನೋಡುತ್ತಲೇ ಬಂದಿದ್ದೀರಿ. —ಮೈಕೇಲ್ ಏಂಜಲೋ

Printed at : Shalivahan Printers, Bangalore-53 Editor & Publisher
M. SRINIVAS